ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮೌಲಾನಾ ವಹೀದುದ್ದೀನ್ ಖಾನ್ ಉಪಭೂಖಂಡದ ಓರ್ವ ಮಹಾನ್ ವಿದ್ವಾಂಸ ಹಾಗೂ ಚಿಂತಕರಾಗಿದ್ದಾರೆ. ಅವರ ಬರಹವು ವೈಜ್ಞಾನಿಕವೂ ವೈಚಾರಿಕವೂ ಆಗಿರುತ್ತದೆ. ಯಾವುದೇ ವಿಷಯವಾಗಿ ಚರ್ಚಿಸುವಾಗ ಓದುಗನನ್ನು ಆಳವಾದ ಚಿಂತನೆಗೆ ಒಡ್ಡುತ್ತದೆ. ಅವರ 'ಅರ್ರಿಸಾಲ' ಎಂಬ ಉರ್ದು ಮಾಸಿಕವು ಅಂತಹುದೇ ವಿಚಾರಗಳನ್ನು ಒಳಗೊಂಡಿತ್ತು. ಅವರು ಅನೇಕ ಗ್ರಂಥಗಳನ್ನೂ ಕಿರು ಹೊತ್ತಗೆಗಳನ್ನೂ ಅವರದೇ ಪ್ರಕಾಶನಾಲಯದಿಂದ ಪ್ರಕಟಿಸಿದ್ದಾರೆ. ವಾಚಕರ ಕೈಯಲ್ಲಿರುವ ಈ ಕಿರು ಹೊತ್ತಗೆಯು 'ಇನ್ಸಾನ್ ಅಪ್ನೆ ಆಪ್ ಕೊ ಪೆಹ್‌ಚಾನ್' ಎಂಬ ಕೃತಿಯ ಕನ್ನಡಾನುವಾದವಾಗಿದೆ.

ಈ ಕೃತಿಯಲ್ಲಿ ಮೌಲಾನಾರವರು ಮಾನವ ಜೀವನದ ವಾಸ್ತವಿಕತೆಯನ್ನು ವಿವರಿಸಿದ್ದಾರೆ. ಮಾನವನ ಜಡದೇಹವು ಬದಲಾಗುತ್ತಾ ಇರುತ್ತದೆ. ಹತ್ತು ವರ್ಷಗಳಿಗೊಮ್ಮೆ ಅವನ ಶರೀರವು ಆಕೃತಿ ಬದಲಾವಣೆಯನ್ನು ಹೊಂದುತ್ತದೆ. ಆದರೆ 'ಮಾನವ' ಎಂಬ ಆತ್ಮವು ಹಾಗೆಯೇ ಇರುತ್ತದೆ. ಮರಣವು ಸತ್ಯ ವಾಗಿದೆ. ಪ್ರತಿಯೊಬ್ಬನೂ ಅದರಿಂದ ಹಾದು ಪರಲೋಕ ಸೇರಬೇಕಾಗಿದೆ. ಅಲ್ಲಿ ಆತ್ಮದ ವಿಚಾರಣೆ ನಡೆದು ಮಾನವನು ಸ್ವರ್ಗಸುಖ ಅಥವಾ ನರಕ ಯಾತನೆಗೆ ಅರ್ಹನಾಗುತ್ತಾನೆ. ಈ ವಾಸ್ತವವನ್ನು ಮಾನವನು ಅರಿತರೆ ಮಾತ್ರ ಅವನಿಗೆ ಒಳಿತೆಂದು ಈ ಕೃತಿಯಲ್ಲಿ ಪ್ರತಿಪಾದಿಸಲಾಗಿದೆ.

ಈಗಾಗಲೇ ಈ ಕೃತಿಯು ಹತ್ತೊಂಬತ್ತು ಆವೃತ್ತಿಗಳನ್ನು ಕಂಡಿದೆ. ಇದೀಗ 20ನೇ ಆವೃತ್ತಿಯನ್ನು ಹೊರ ತರುತ್ತಿರುವುದು ಇದರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಇದು ಇನ್ನಷ್ಟು ಜನರಿಗೆ ತಲಪುವ ಅಗತ್ಯವಿದೆ.

— ಶಾಂತಿ ಪ್ರಕಾಶನ

## ಅನುಕ್ರಮಣಿಕೆ

# ನಿನ್ನನ್ನು ನೀನರಿಯೋ ಮಾನವಾ

## ಮಾನವನ ಅತಿ ದೊಡ್ಡ ಸಮಸ್ಯೆ!

"ಇಂದಿನ ಮಾನವನ ಅತಿ ದೊಡ್ಡ ಸಮಸ್ಯೆ ಯಾವುದು?" ಎಂದು ಒಂದು ಸಭೆಯಲ್ಲಿ ಜನರನ್ನು ಕೇಳಿದರೆ, ಅದಕ್ಕೆ ಒಬ್ಬೊಬ್ಬರು ಒಂದೊಂದು ಉತ್ತರ ಕೊಡಬಹುದು. ಅಣ್ವಸ್ತ್ರಗಳೇ ಆಧುನಿಕ ಮಾನವನ ಅತಿದೊಡ್ಡ ಸಮಸ್ಯೆ ಎಂದು ಒಬ್ಬನು ಹೇಳಿದರೆ, ಇನ್ನೊಬ್ಬನು ಹೆಚ್ಚುತ್ತಿರುವ ಜನಸಂಖ್ಯೆಯೇ ಮಹಾ ಸಮಸ್ಯೆ ಎನ್ನಬಹುದು. ಮತ್ತೊಬ್ಬನು ಉತ್ಪಾದನೆ ಮತ್ತು ವಿತರಣೆಯ ವ್ಯವಸ್ಥೆಯನ್ನು ಸರಿಪಡಿಸುವುದೇ ಈ ಯುಗದ ಅತಿದೊಡ್ಡ ಸಮಸ್ಯೆ ಎಂದು ಹೇಳಬಹುದು. ಒಟ್ಟಿನಲ್ಲಿ ಒಂದು ಪ್ರಶ್ನೆಗೆ ವಿವಿಧ ಬಗೆಯ ಉತ್ತರಗಳು ಬರಬಹುದು.

ಮನುಷ್ಯನು ಇನ್ನೂ ಮನುಷ್ಯನನ್ನು ಗುರುತಿಸಿಲ್ಲ ಎಂಬುದೇ ಹೀಗಾಗಲು ಕಾರಣ. ಒಂದು ವೇಳೆ ಆತ ತನ್ನನ್ನೇ ತಾನು ಅರಿತಿದ್ದರೆ ಈ ರೀತಿ ವಿವಿಧ ಉತ್ತರಗಳು ಬರುತ್ತಿರಲಿಲ್ಲ. ಬದಲಾಗಿ ಎಲ್ಲರ ಉತ್ತರ ಒಂದೇ ಆಗಿರುತ್ತಿತ್ತು. ಮನುಷ್ಯನು ತನ್ನ ವಾಸ್ತವಿಕತೆಯನ್ನು ಮರೆತಿರುವುದೇ ಇಂದಿನ ಅತಿದೊಡ್ಡ ಸಮಸ್ಯೆ ಎಂದೇ ಎಲ್ಲರೂ ಹೇಳುತ್ತಿದ್ದರು. ತನಗೊಂದು ದಿನ ಸಾಯಲಿಕ್ಕಿದೆ, ಸತ್ತ ನಂತರ ತನ್ನ ಒಡೆಯನ ಮುಂದೆ ತನ್ನ ಬದುಕಿನ ಬಗ್ಗೆ ಲೆಕ್ಕ ಸಮರ್ಪಿಸಲಿಕ್ಕಿದೆ ಎಂಬುದನ್ನು ಮನುಷ್ಯನು ನಿಜಕ್ಕೂ ಮರೆತಿದ್ದಾನೆ. ನಾವು ಜೀವನದ ವಾಸ್ತವಿಕತೆಯನ್ನು ಅರ್ಥ ಮಾಡಿಕೊಂಡರೆ ಇಹಲೋಕದ

ಬದಲು ಪರಲೋಕವನ್ನೇ ನಮ್ಮ ನಿಜವಾದ ಸಮಸ್ಯೆಯೆಂದು ಪರಿಗಣಿಸುವೆವು.

ಇಂದು ಕೂಡಾ ಲೋಕದ ಹೆಚ್ಚಿನೆಲ್ಲ ಮನುಷ್ಯರು ದೇವನನ್ನೂ ಪರಲೋಕವನ್ನೂ ನಂಬುತ್ತಾರೆ. ಅವರು ಈ ವಾಸ್ತವಗಳನ್ನು ನಿರಾಕರಿಸುವುದಿಲ್ಲ. ಆದರೆ ಅವರ ಈ ನಂಬಿಕೆಗೂ ಅವರ ಕರ್ಮಗಳಿಗೂ ಯಾವುದೇ ನಂಟು ಇಲ್ಲವಾಗಿದೆ. ನಿಜ ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಇಹ ಜೀವನವನ್ನು ಯಾವ ರೀತಿ ಯಶಸ್ವಿಗೊಳಿಸಬೇಕು ಎಂಬ ಬಗ್ಗೆ ಮಾತ್ರ ಚಿಂತಿಸುತ್ತಾನೆ.

ಒಂದು ದಿನ ನಮ್ಮ ವೈಜ್ಞಾನಿಕ ವೀಕ್ಷಣಾ ಕೇಂದ್ರಗಳು ಹಠಾತ್ತನೆ, "ಭೂಮಿ ತನ್ನ ಗುರುತ್ವಾಕರ್ಷಣ ಶಕ್ತಿಯನ್ನು ಕಳೆದುಕೊಂಡಿದೆ. ಅದು ಗಂಟೆಗೆ ಆರು ಸಾವಿರ ಮೈಲು ವೇಗದಲ್ಲಿ ಸೂರ್ಯನೆಡೆಗೆ ಸೆಳೆಯಲ್ಪಡುತ್ತಿದೆ" ಎಂದು ಘೋಷಿಸಿಬಿಟ್ಟರೆ ಆ ಕ್ಷಣವೇ ಇಡೀ ಭೂಮಿಯಲ್ಲಿ ಕೋಲಾಹಲವೆದ್ದೀತು. ಏಕೆಂದರೆ ಕೆಲವೇ ದಿನಗಳಲ್ಲಿ ಈ ಭೂಮಿಯಲ್ಲಿನ ಎಲ್ಲ ಜೀವಿಗಳು ನಾಶವಾಗುವುವು ಎಂಬುದೇ ಈ ಪ್ರಕಟನೆಯ ಅರ್ಥವಲ್ಲವೇ?

ನಿಜವಾಗಿ ಈ ಜಗತ್ತು ಇದಕ್ಕಿಂತಲೂ ದೊಡ್ಡ ವಿಪತ್ತೊಂದನ್ನು ಎದುರಿಸುತ್ತಿದೆ. ಆದರೆ ಆ ವಿಪತ್ತಿನ ಬಗ್ಗೆ ಯಾರೂ ಚಿಂತಿತರಾಗಿಲ್ಲ. ಆ ವಿಪತ್ತು ಯಾವುದು?

ಅದುವೇ ಅಂತಿಮ ದಿನ ಅಥವಾ ಪ್ರಳಯ ದಿನದ ವಿಪತ್ತು. ಭೂಮಿ-ಆಕಾಶಗಳನ್ನು ಸೃಷ್ಟಿಸಲಾದ ಸಂದರ್ಭದಲ್ಲಿಯೇ, ಮುಂದೊಂದು ದಿನ ಅವು ಈ ವಿಪತ್ತಿಗೆ ಸಿಲುಕುವುದು ನಿರ್ಣಯವಾಗಿದೆ. ನಾವೆಲ್ಲರೂ ಬಹಳ ವೇಗವಾಗಿ ಆ ವಿಪತ್ತಿನೆಡೆಗೇ ಸಾಗುತ್ತಿದ್ದೇವೆ. ನಂಬಿಕೆಯ ಮಟ್ಟಿಗೆ ಪ್ರತಿಯೊಬ್ಬರೂ ಈ ಸತ್ಯವನ್ನು ಒಪ್ಪುತ್ತಾರೆ. ಆದರೆ ಈ ವಿಷಯದ ಕುರಿತು ಗಂಭೀರವಾಗಿ ಚಿಂತಿಸಬೇಕಾದ ಅಗತ್ಯವನ್ನು ಮನಗಂಡವರು ಮಾತ್ರ ಬಹಳ ಕಡಿಮೆ.

ನೀವು ಸಂಜೆಯ ಹೊತ್ತು ಯಾವುದಾದರೂ ಪೇಟೆಗೆ ಹೋಗಿ ಅಲ್ಲಿ ಇರುವ ಜನರ ಚಟುವಟಿಕೆಗಳನ್ನೆಲ್ಲಾ ನೋಡಿ ಅವರ ಉದ್ದೇಶವನ್ನು

ಗಮನಿಸಿದರೆ, ಇಂದಿನ ಮಾನವರು ಯಾವುದನ್ನು ತಮ್ಮ ನೈಜ ಸಮಸ್ಯೆಯೆಂದು ಪರಿಗಣಿಸುತ್ತಿದ್ದಾರೆಂಬುದು ನಿಮಗೆ ಸ್ಪಷ್ಟವಾಗಿ ಬಿಡುತ್ತದೆ. ಸ್ವಲ್ಪ ಊಹಿಸಿ! ಆ ಪೇಟೆಗೆ ಅಷ್ಟೆಲ್ಲಾ ವಾಹನಗಳು ಏಕೆ ಬಂದು ಹೋಗುತ್ತಿವೆ? ವ್ಯಾಪಾರಿಗಳೇಕೆ ಆ ರೀತಿ ಅಂಗಡಿಗಳನ್ನಿಟ್ಟು ಕುಳಿತಿದ್ದಾರೆ? ಜನರೇಕೆ ಅಲ್ಲಿಗೆ ಅಷ್ಟು ದೊಡ್ಡ ಸಂಖ್ಯೆಯಲ್ಲಿ ಬಂದು ನೆರೆಯುತ್ತಿದ್ದಾರೆ? ಅವರು ಯಾವ ವಿಷಯದ ಬಗ್ಗೆ ಮಾತನಾಡುತ್ತಿದ್ದಾರೆ? ಅಲ್ಲಿ ಒಬ್ಬರು ಇನ್ನೊಬ್ಬರನ್ನು ಕಂಡು ಮಾತನಾಡುತ್ತಿರುವುದರ ಉದ್ದೇಶವೇನು? ಜನರು ಯಾವುದರಲ್ಲಿ ಆಸಕ್ತರಾಗಿದ್ದಾರೆ? ಅವರ ಪ್ರತಿಭೆ–ಸಾಮರ್ಥ್ಯಗಳು, ಅವರ ಜೇಬಿನ ಹಣ ಇವೆಲ್ಲಾ ಯಾತಕ್ಕಾಗಿ ಬಳಕೆಯಾಗುತ್ತಿವೆ? ಸಂತುಷ್ಟರಾಗಿರುವವರು ತಮಗೆ ಏನು ಸಿಕ್ಕಿತೆಂಬ ಕಾರಣಕ್ಕಾಗಿ ಸಂತುಷ್ಟರಾಗಿದ್ದಾರೆ? ಸಪ್ಪೆ ಮೋರೆ ಹಾಕಿ ಕೊಂಡಿರುವವರು ಆ ರೀತಿ ಸಪ್ಪೆಯಾಗಿರಲು ಕಾರಣವೇನಿರಬಹುದು? ಜನರು ತಮ್ಮ ಮನೆಯಿಂದ ಏನನ್ನು ತರುತ್ತಾರೆ? ಮರಳಿ ಏನನ್ನು ಮನೆಗೆ ಒಯ್ಯಬಯಸುತ್ತಾರೆ!

ಜನರ ಚಟುವಟಿಕೆಗಳು, ಅವರ ಮಾತುಕತೆ, ವ್ಯವಹಾರ ಇತ್ಯಾದಿಗಳನ್ನೆಲ್ಲಾ ನೋಡಿ ಅದರಿಂದ ಮೇಲಿನ ಪ್ರಶ್ನೆಗಳಿಗೆಲ್ಲಾ ಉತ್ತರ ಕಂಡುಕೊಳ್ಳಲು ನಿಮಗೆ ಸಾಧ್ಯವಾದರೆ, ಇಂದಿನ ಮನುಷ್ಯನು ಯಾವ ವಸ್ತುವನ್ನು ತನ್ನ ನೈಜ ಸಮಸ್ಯೆಯೆಂದು ಪರಿಗಣಿಸಿದ್ದಾನೆ ಮತ್ತು ಅವನು ಏನನ್ನು ಸಂಪಾದಿಸ ಬಯಸುತ್ತಾನೆ ಎಂಬ ಪ್ರಶ್ನೆಯ ಉತ್ತರವೂ ನಿಮಗೆ ಖಂಡಿತ ಸಿಗುತ್ತದೆ.

ವಾಸ್ತವದಲ್ಲಿ ಈ ಪೇಟೆ–ಮಾರುಕಟ್ಟೆಗಳು, ಜನನಿಬಿಡ ಬೀದಿಗಳು ಮತ್ತು ಜನರ ನಿರಂತರ ಚಲನವಲನಗಳೆಲ್ಲಾ ಇಂದಿನ ಮಾನವ ತನ್ನ ಸ್ವೇಚ್ಛೆಯ ಬೆನ್ನಟ್ಟುತ್ತಿದ್ದಾನೆ ಮತ್ತು ಪರಲೋಕದ ಬದಲು ಇಹಲೋಕದ ಯಶಸ್ಸನ್ನು ಸಾಧಿಸ ಬಯಸುತ್ತಾನೆ ಎಂಬುದನ್ನೇ ಸಾರಿ ಹೇಳುತ್ತಿವೆ. ಇಂದಿನ ಮಾನವ ಸಂತುಷ್ಟನೆಂದಾದರೆ ಆತನ ಲೌಕಿಕ ಇಚ್ಛೆಗಳು ಈಡೇರಿವೆ ಎಂಬುದೇ ಆ ಸಂತಸಕ್ಕೆ ಕಾರಣ; ಆತ ದುಃಖಿತನೆಂದಾದರೆ ಆತನ ಲೌಕಿಕ ಇಚ್ಛೆಗಳು ಈಡೇರುತ್ತಿಲ್ಲ ಎಂಬುದೇ ಆ ದುಃಖಕ್ಕೆ ಕಾರಣ.

ಇಂದಿನ ಅಗತ್ಯಗಳ ಪೂರೈಕೆ, ಇಂದಿನ ಸುಖ, ಇಂದಿನ ಗೌರವ, ಇಂದಿನ ಲಾಭ... ಇವುಗಳನ್ನು ಗಳಿಸುವುದೇ ಗೆಲುವು ಎಂದು ಜನರು ಭಾವಿಸುತ್ತಿದ್ದಾರೆ. ಹಾಗೆಯೇ ಇವುಗಳನ್ನೆಲ್ಲಾ ಗಳಿಸಲು ಸಾಧ್ಯವಾಗದೆ ಹೋದರೆ ಅವರ ದೃಷ್ಟಿಯಲ್ಲಿ ಅದುವೇ ಸೋಲು. ಆದ್ದರಿಂದ ಸಂಪೂರ್ಣ ಮನುಷ್ಯ ಪರಿವಾರವು ಇಂದು ಇವೇ ವಸ್ತುಗಳ ಹಿಂದೆ ಓಡುತ್ತಿದೆ. ಮುಂದಿನ ಬದುಕಿನ ಚಿಂತೆ ಯಾರಿಗೂ ಇಲ್ಲವಾಗಿದೆ. ಪ್ರತಿಯೊಬ್ಬನೂ ಇಂದಿನ ಬಗ್ಗೆ ಚಿಂತಿತನಾಗಿದ್ದು, ಇಂದಿನ ಬೆನ್ನು ಹತ್ತಿದ್ದಾನೆ.

ಇದು ಕೇವಲ ದೊಡ್ಡದೊಡ್ಡ ನಗರಗಳ ವಿಷಯವಲ್ಲ, ಕೆಲವೇ ಮಂದಿ ತಿರುಗಾಡುವಂತಹ ಸಣ್ಣಪುಟ್ಟ ಪ್ರದೇಶಗಳಲ್ಲೂ ಜನರ ಅವಸ್ಥೆ ಇಷ್ಟೇ. ನೀವು ಯಾರನ್ನು ಬೇಕಿದ್ದರೂ ನೋಡಿ, ಪ್ರತಿಯೊಬ್ಬನೂ ಇದೇ ಚಿಂತೆಯಲ್ಲಿ ಮಗ್ನನಾಗಿದ್ದಾನೆ. ಗಂಡಿರಲಿ – ಹೆಣ್ಣಿರಲಿ, ಬಡವನಿರಲಿ – ಶ್ರೀಮಂತನಿರಲಿ, ತರುಣನಿರಲಿ – ವೃದ್ಧನಿರಲಿ, ವಿದ್ಯಾವಂತನಿರಲಿ – ಅವಿದ್ಯಾವಂತನಿರಲಿ, ಹಳ್ಳಿಗನಿರಲಿ– ಪಟ್ಟಣಿಗನಿರಲಿ, ಮಾತ್ರವಲ್ಲ ಧಾರ್ಮಿಕ ವ್ಯಕ್ತಿಯಿರಲಿ ಅಥವಾ ಧಾರ್ಮಿಕನಲ್ಲದವನಿರಲಿ... ಪ್ರತಿಯೊಬ್ಬರೂ ಒಂದೇ ದಿಕ್ಕಿನೆಡೆಗೆ ಓಡುತ್ತಿದ್ದಾರೆ. ಲೋಕದಲ್ಲಿ ತನಗೆ ಸಾಧ್ಯವಿದ್ದಷ್ಟು ಹೆಚ್ಚು ಸಂಪಾದಿಸಬೇಕು ಎಂಬುದೇ ಪ್ರತಿಯೊಬ್ಬನ ಮಹದಾಶೆ ಆಗಿರುತ್ತದೆ, ಇದನ್ನೇ ಅವರು ತಮ್ಮ ಕರ್ತವ್ಯ ಎಂದು ಭಾವಿಸಿದ್ದಾರೆ. ತಮ್ಮ ಅತ್ಯುತ್ತಮ ಸಮಯ–ಸಾಮರ್ಥ್ಯಗಳನ್ನೆಲ್ಲಾ ಇದಕ್ಕಾಗಿಯೇ ಮುಡಿಪಿಟ್ಟಿದ್ದಾರೆ. ಹಗಳಿರುಳೂ ಇದೇ ಚಿಂತೆಯಲ್ಲಿ ಮುಳುಗಿ ರುತ್ತಾರೆ. ಕೊನೆಗೆ ತಮ್ಮ ಧರ್ಮ–ನಂಬಿಕೆ, ಆತ್ಮಸಾಕ್ಷಿ ಎಲ್ಲವನ್ನೂ ಅಡವಿಟ್ಟು ಅಥವಾ ಮಾರಿ ಲೌಕಿಕ ಯಶಸ್ಸು ಸಿಗುತ್ತದೆಂದಾದರೆ ಅವರು ಅದಕ್ಕೂ ಸಿದ್ಧ. ಲೌಕಿಕತೆಯ 'ಭೂತ'ದೆದುರು ಎಲ್ಲವನ್ನೂ ಬಲಿ ನೀಡಲು ಅವರು ತಯಾರು. ಅವರಿಗೆ ಲೌಕಿಕ ಸುಖ ಬೇಕು – ಅದು ಹೇಗೆ ಸಿಕ್ಕಿದರೂ ಆದೀತು.

ಆದರೆ, ಈ ರೀತಿ ಸಿಗುವ ಯಶಸ್ಸು ಕೇವಲ ಈ ಲೋಕದ ಯಶಸ್ಸಾಗಿ ರುತ್ತದೆ. ಪರಲೋಕದಲ್ಲಿ ಇದು ಯಾವ ಕೆಲಸಕ್ಕೂ ಬಾರದು. ಈ ರೀತಿ ಲೌಕಿಕ ಯಶಸ್ಸಿನ ಚಿಂತೆಯಲ್ಲಿ ಮಗ್ನನಾಗಿ, ಪರಲೋಕದ ಯಶಸ್ಸಿನ ಬಗ್ಗೆ

ಮರೆತು ಬಿಟ್ಟವನು ತನ್ನ ಯೌವನದಲ್ಲಿ, ತನ್ನ ವೃದ್ಧಾಪ್ಯಕ್ಕಾಗಿ ಏನೂ ಮಾಡಿ ಇಡದ ವ್ಯಕ್ತಿಗೆ ಸಮಾನ ಎನ್ನಬಹುದು. ಆತ ಮುದುಕನಾಗಿ, ಅಶಕ್ತನಾಗಿ, ಇನ್ನು ಅವನಿಂದ ಕೆಲಸವೇನೂ ಮಾಡಲಿಕ್ಕಾಗುವುದಿಲ್ಲ ಎಂದಾದಾಗ, ತನಗೆ ಇನ್ನು ಯಾವುದೇ ನೆಲೆ ಇಲ್ಲ ಎಂದು ಅವನಿಗೆ ಹಠಾತ್ತನೆ ಮನವರಿಕೆಯಾಗುತ್ತದೆ.

ಆದರೆ ಆಗ ಅವನಿಗೆ ಮನೆ ಕಟ್ಟಲು ಸಾಧ್ಯವಾಗುವುದಿಲ್ಲ. ವಿವಿಧ ಋತು ಗಳಲ್ಲಿ ತನ್ನನ್ನು ಸುರಕ್ಷಿತ ವಾಗಿಡಲು ಬೇಕಾದ ವಸ್ತ್ರ ಇತ್ಯಾದಿಗಳು ತನ್ನಲ್ಲಿಲ್ಲ ಎಂಬುದು ಅವನಿಗೆ ತಿಳಿಯುತ್ತದೆ. ಆದರೆ ಆ ವಸ್ತುಗಳನ್ನು ಸಂಪಾದಿಸಿ ತರಲು ಅವನಿಗೆ ಸಾಧ್ಯವಾಗುವುದಿಲ್ಲ. ತನ್ನ ಬಳಿ ಆಹಾರವೇನೂ ಇಲ್ಲ ಎಂಬುದು ಅವನಿಗೆ ತಿಳಿಯುತ್ತದೆ. ಆದರೆ ಆಹಾರ ಸಂಪಾದಿಸಿ ತರುವ ಸಾಮರ್ಥ್ಯ ಅವನಲ್ಲಿರುವುದಿಲ್ಲ. ಆತ ಹತಾಶನಾಗುತ್ತಾನೆ. ಯಾರದೋ ಜಗಲಿಯಲ್ಲಿ ಬಿದ್ದುಕೊಂಡಿರುತ್ತಾನೆ. ಅವನನ್ನು ಕಂಡರೆ ನಾಯಿಗಳು ಬೊಗಳತೊಡಗುತ್ತವೆ, ಮಕ್ಕಳು ಕಲ್ಲೆಸೆಯುತ್ತಾರೆ...

ಇಂತಹ ದೃಶ್ಯಗಳನ್ನು ನಾವು ನಿತ್ಯ ಕಾಣುತ್ತಿರು ತ್ತೇವೆ. ಈ ಲೋಕದಲ್ಲಿರುವಾಗ ಪರಲೋಕಕ್ಕಾಗಿ ಸಂಪಾದಿಸದ ವ್ಯಕ್ತಿ ಪರಲೋಕದಲ್ಲಿ ಎಂತಹ ದುಃಸ್ಥಿತಿಗೆ ಒಳಗಾಗಬೇಕಾದೀತು ಎಂಬುದನ್ನು ಊಹಿಸಲು ಇಂತಹ ದೃಶ್ಯಗಳು ಸ್ವಲ್ಪ ಮಟ್ಟಿಗೆ ನಮಗೆ ಸಹಾಯಕವಾಗುತ್ತವೆ. ಆದರೆ ಇಷ್ಟಾಗಿಯೂ ನಮ್ಮಲ್ಲಿ ಯಾವುದೇ ಕಳಕಳಿ ಉಂಟಾಗುವುದಿಲ್ಲ! ನಮ್ಮ ಪೈಕಿ ಪ್ರತಿಯೊಬ್ಬನೂ ನಾಳಿನ ಬಗ್ಗೆ ನಿಶ್ಚಿಂತನಾಗಿದ್ದಾನೆ ಮತ್ತು ಇಂದಿನ ಬಗ್ಗೆ ಮಾತ್ರ ಚಿಂತಿತನಾಗಿದ್ದಾನೆ.

ಯುದ್ಧದ ದಿನಗಳಲ್ಲಿ ಶತ್ರುಗಳ ವಿಮಾನ ದಾಳಿಯ ಬಗ್ಗೆ ಎಚ್ಚರಿಕೆ ಕೊಡಲು ಸೈರನ್ ಬಾರಿಸಲಾಗುತ್ತದೆ. "ಶತ್ರುವಿನ ವಿಮಾನಗಳು ಮಾರಕ ಬಾಂಬುಗಳನ್ನು ನಿಮ್ಮ ಮೇಲೆ ಸುರಿಸಲು ಧಾವಿಸಿಬರುತ್ತಿವೆ. ಕೆಲವೇ ಕ್ಷಣಗಳಲ್ಲಿ ಈ ನಿಮ್ಮ ನಗರ ಹೊಗೆ ಮತ್ತು ಅಗ್ನಿಜ್ವಾಲೆಗಳಿಂದ ತುಂಬಿ ಹೋಗುವುದು. ತಕ್ಷಣ ಓಡಿ ಹೋಗಿ ಸುರಕ್ಷಿತ ತಾಣಗಳಲ್ಲಿ ಅವಿತುಕೊಳ್ಳಿರಿ"

ಎಂಬುದಾಗಿ ಈ ಸೈರನ್ ಧ್ವನಿಯು ಎಚ್ಚರಿಸುತ್ತದೆ. ಆಗ ಪ್ರತಿಯೊಬ್ಬರೂ ಎಲ್ಲವನ್ನೂ ಮರೆತು ಸುರಕ್ಷಿತ ತಾಣಗಳೆಡೆಗೆ ಓಡತೊಡಗುತ್ತಾರೆ. ಅತ್ಯಂತ ಜನನಿಬಿಡವಾಗಿದ್ದ ರಸ್ತೆಗಳು ಕ್ಷಣ ಮಾತ್ರದಲ್ಲಿ ನಿರ್ಜನವಾಗಿ ಬಿಡುತ್ತವೆ. ಸೈರನ್‌ನ ಶಬ್ದ ಕೇಳಿಯೂ ಹೀಗೆ ಓಡಿ ಹೋಗದ ವ್ಯಕ್ತಿಯನ್ನು ಜನರು ಮೂರ್ಖನೆನ್ನುವರು ಅಥವಾ ಅವನ ತಲೆ ಕೆಟ್ಟಿದೆ ಎಂದು ಭಾವಿಸುವರು.

ಇದು ಒಂದು ಸಣ್ಣ ಲೌಕಿಕ ವಿಪತ್ತಿನ ಮಾತಾಯಿತು. ಆದರೆ ಇದಕ್ಕಿಂತ ಬಹಳಷ್ಟು ದೊಡ್ಡ ವಿಪತ್ತೊಂದು ಖಚಿತವಾಗಿ ನಮಗೆ ಎದುರಾಗಲಿಕ್ಕಿದೆ. ಆ ವಿಪತ್ತಿನ ಬಗ್ಗೆ ಜಗತ್ತಿನ ಸೃಷ್ಟಿಕರ್ತನೇ ಎಚ್ಚರಿಕೆ ಕೊಟ್ಟಿದ್ದಾನೆ, "ಜನರೇ! ನನ್ನನ್ನು ಆರಾಧಿಸಿರಿ, ಪರಸ್ಪರರ ಹಕ್ಕು-ಬಾಧ್ಯತೆಗಳನ್ನು ಪಾಲಿಸಿರಿ, ನನ್ನ ಆಜ್ಞೆಗೆ ಅನುಸಾರ ಬದುಕು ಸಾಗಿಸಿರಿ. ಇದಕ್ಕೆ ವ್ಯತಿರಿಕ್ತವಾಗಿ ನಡೆದವರಿಗೆ ಅವರು ಊಹಿಸಲಿಕ್ಕೂ ಸಾಧ್ಯವಿಲ್ಲದಷ್ಟು ಉಗ್ರ ಶಿಕ್ಷೆ ಕೊಡಲಾಗುವುದು, ಅವರು ಅತ್ಯಂತ ಯಾತನಾಮಯವಾದ ನಿರಂತರ ಶಿಕ್ಷೆಯೊಂದನ್ನು ಶಾಶ್ವತವಾಗಿ ಅನುಭವಿಸುತ್ತಿರುವರು. ಆ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಅವರಿಗೆಂದೂ ಸಾಧ್ಯವಾಗದು..." ಎಂಬ ಸಂದೇಶವನ್ನು ಅವನು ತನ್ನ ಪ್ರವಾದಿಗಳ ಮೂಲಕ ಜಗತ್ತಿಗೆ ಕೊಟ್ಟಿರುವನು.

ಈ ಸಂದೇಶವನ್ನು ಪ್ರತಿಯೊಬ್ಬರೂ ಕೇಳಿದ್ದಾರೆ. ಪ್ರತಿಯೊಬ್ಬರೂ ಇದು ಸರಿಯೆಂದು ಒಂದಲ್ಲೊಂದು ರೀತಿಯಲ್ಲೂ, ಮಾತಿನಲ್ಲೂ ಒಪ್ಪುತ್ತಾರೆ. ಆದರೂ ಜನರು ಇಷ್ಟೊಂದು ದೊಡ್ಡ ವಿಷಯವನ್ನು, ಏನೂ ಇಲ್ಲ ಎಂಬ ರೀತಿಯಲ್ಲಿ ಕಡೆಗಣಿಸುತ್ತಿದ್ದಾರೆ. ಲೌಕಿಕ ಲಾಭ ಗಳಿಸಲಿಕ್ಕಾಗಿ, ಮಾಡಬಾರದ್ದನ್ನೆಲ್ಲಾ ಮಾಡುತ್ತಿದ್ದಾರೆ. ಜೀವನದ ಗಾಡಿ ಯಾವ ಮಾರ್ಗದಲ್ಲಿ ಹೋಗುವುದು ನಿಷಿದ್ಧವೋ, ಆ ಮಾರ್ಗದಲ್ಲೇ ವೇಗವಾಗಿ ಓಡುತ್ತಿದೆ. ಸೇನಾ ಕೇಂದ್ರದಿಂದ ಕೇಳಿಸುವ ಸೈರನ್‌ನ ಸಂದೇಶವನ್ನು ಪಾಲಿಸಲು ಪ್ರತಿಯೊಬ್ಬರೂ ತಕ್ಷಣವೇ ಲಗುಬಗೆಯಿಂದ ಧಾವಿಸುತ್ತಾರೆ. ಆದರೆ ವಿಶ್ವದೊಡೆಯನು ಯಾವ ವಿಪತ್ತಿನ ವಿರುದ್ಧ ಎಚ್ಚರಿಸಿರುವನೋ ಅದರ ಬಗ್ಗೆ ಯಾರೊಬ್ಬರೂ ಚಿಂತಿಸುತ್ತಿಲ್ಲ, ಅವನ ಕರೆಗೆ 'ಓ'ಗೊಟ್ಟು ಧಾವಿಸುತ್ತಿಲ್ಲ.

## ಇದಕ್ಕೆ ಕಾರಣವೇನು?

ಸೇನಾ ಕೇಂದ್ರದಿಂದ ಹೊರಟ ಸೈರನ್ ಧ್ವನಿಯು ಯಾವ ಅಪಾಯದ ವಿರುದ್ಧ ಎಚ್ಚರಿಸುತ್ತದೋ ಆ ಅಪಾಯ, ಸಾಕ್ಷಾತ್ ಇದೇ ಲೋಕದಲ್ಲಿ ಮನುಷ್ಯನ ಕಣ್ಣ ಮುಂದೆಯೇ ಸಂಭವಿಸಲಿದ್ದು, ಅದರ ಪರಿಣಾಮವನ್ನು ಅವನು ತಕ್ಷಣವೇ ಅನುಭವಿಸಬೇಕಾಗುತ್ತದೆ. ಆದರೆ ದೇವನು ಯಾವ ಅಪಾಯದ ಬಗ್ಗೆ ಸೂಚಿಸುತ್ತಿರುವನೋ ಅದು ಎದುರಾಗುವುದು ಮರಣದ ನಂತರ ಮಾತ್ರ. ನಮ್ಮ ಮತ್ತು ಆ ವಿಪತ್ತಿನ ಮಧ್ಯೆ ಮರಣವೆಂಬ ಗೋಡೆಯೊಂದು ಅಡ್ಡವಿದೆ.

ಆದ್ದರಿಂದ ನಾವಿಂದು ಆ ವಿಪತ್ತನ್ನು ಕಣ್ಣಾರೆ ಕಾಣುವ ಸ್ಥಿತಿಯಲ್ಲಿಲ್ಲ. ವಿಮಾನಗಳಾಗಲೀ, ಬಾಂಬುಗಳಾಗಲೀ, ಬೆಂಕಿಯಾಗಲೀ, ಹೊಗೆಯಾಗಲೀ ಯಾವುದೂ ನಮಗೆ ಕಾಣಿಸುತ್ತಿಲ್ಲ. ಆದ್ದರಿಂದಲೇ ವಿಮಾನ ದಾಳಿಯ ಬಗ್ಗೆ ಸೈರನ್ ಮೂಲಕ ಕೊಡಲಾಗುವ ಎಚ್ಚರಿಕೆಯನ್ನು ನಾವು ನಂಬುತ್ತೇವಾದರೂ ದೇವನು ಅದಕ್ಕಿಂತ ದೊಡ್ಡ ಮಹಾ ವಿಪತ್ತೊಂದರ ಬಗ್ಗೆ ಎಚ್ಚರಿಸುವಾಗ ಅದನ್ನು ಕೇಳಿ ನಮಗೆ ಕಳವಳವಾಗುವುದಿಲ್ಲ. ಕರ್ಮರಂಗಕ್ಕೆ ಇಳಿಯುವುದನ್ನು ನಮ್ಮ ಪಾಲಿಗೆ ಅನಿವಾರ್ಯಗೊಳಿಸುವಂತಹ ಅಥವಾ ಅದಕ್ಕೆ ನಿರ್ಬಂಧಿಸುವಂತಹ ವಿಶ್ವಾಸ ನಮಗೆ ಈ ಎಚ್ಚರಿಕೆಯ ಮೇಲಿಲ್ಲ.

ಅಲ್ಲಾಹನು ನಮಗೆ ನಮ್ಮ ಮುಂದಿರುವ ವಸ್ತುಗಳನ್ನಷ್ಟೇ ನೋಡಬಲ್ಲ ಹಣೆಯ ಕೆಳಗಿನ ಎರಡು ಕಣ್ಣುಗಳನ್ನು ಮಾತ್ರ ಕೊಟ್ಟಿರುವುದಲ್ಲ, ಜೊತೆಗೆ ಬಹಳಷ್ಟು ದೂರದ ವರೆಗೆ ನೋಡಬಲ್ಲ, ಅಡಗಿರುವಂತಹ ವಾಸ್ತವಿಕತೆಗಳನ್ನು ಗುರುತಿಸಬಲ್ಲ ಇನ್ನೊಂದು ಕಣ್ಣನ್ನೂ ಅವನು ನಮಗೆ ದಯಪಾಲಿಸಿರುವನು. ಅದುವೇ ಬುದ್ಧಿಯ ಕಣ್ಣು. ಪ್ರಸ್ತುತ ವಿಪತ್ತಿನ ಬಗ್ಗೆ ಮತ್ತು ಪರಲೋಕದ ಬಗ್ಗೆ ಜನರಿಗೆ ಸರಿಯಾದ ವಿಶ್ವಾಸ ಇಲ್ಲದಿರಲು, ಅವರು ಈ ಕಣ್ಣನ್ನು ಬಳಸದಿರುವುದೇ ಕಾರಣ. ಯಾವುದು ಕಣ್ಣಿಗೆ ಕಾಣಿಸುತ್ತದೋ ಅದುವೇ ಸತ್ಯ ಎಂದು ಅವರು ನಂಬಿಕೊಂಡಿದ್ದಾರೆ. ನಿಜವಾಗಿ ನಮ್ಮ ಕಣ್ಣಿಗೆ ಕಾಣದ

ಇರುವ ವಸ್ತುವೇ, ಕಣ್ಣಿಗೆ ಕಾಣಿಸುವ ವಸ್ತುವಿಗಿಂತ ಹೆಚ್ಚು ವಿಶ್ವಾಸಯೋಗ್ಯ ಹಾಗೂ ವಾಸ್ತವವಾಗಿದೆ ಎಂಬುದು ಚಿಂತನೆಯಿಂದ ತಿಳಿಯುತ್ತದೆ.

ಈ ಲೋಕದಲ್ಲಿ ಪ್ರತಿಯೊಬ್ಬನೂ ಒಪ್ಪುವ ಸತ್ಯ ಯಾವುದು ಎಂದು ಪ್ರಶ್ನಿಸಿದರೆ ಅದಕ್ಕಿರುವ ಒಂದೇ ಉತ್ತರ ಮರಣ. ಮರಣ ಸತ್ಯ ಎಂಬುದನ್ನು ಹಿರಿಯ–ಕಿರಿಯರೆನ್ನದೆ ಎಲ್ಲರೂ ಒಪ್ಪುತ್ತಾರೆ. ಯಾವುದೇ ಕ್ಷಣದಲ್ಲಿ ತನ್ನನ್ನು ಮರಣವು ಬಂದು ಆವರಿಸಬಹುದು ಎಂಬುದು ನಮ್ಮ ಪೈಕಿ ಎಲ್ಲರಿಗೂ ತಿಳಿದಿರುತ್ತದೆ. ಆದರೆ ಸಾಮಾನ್ಯವಾಗಿ ಮರಣದ ಆಲೋಚನೆ ಬಂದಾಗಲೆಲ್ಲಾ ಜನರು, "ನನ್ನ ಮರಣದ ಅನಂತರ ನನ್ನ ಮಕ್ಕಳ ಗತಿಯೇನು?" ಎಂದು ಮಾತ್ರ ಚಿಂತಿಸುತ್ತಾರೆ.

ಮರಣಕ್ಕೆ ಮುಂಚೆ ಅವರು ತಮ್ಮ ಸ್ವಂತ ಬದುಕಿನ ಬಗ್ಗೆ ಬಹಳಷ್ಟು ಚಿಂತಿಸಿರುತ್ತಾರೆ. ಆದರೆ ಮರಣದ ಅನಂತರದ ಪ್ರಶ್ನೆ ಬಂದಾಗ ಅವರು ಕೇವಲ ತಮ್ಮ ಮನೆ ಮತ್ತು ಮಡದಿ ಮಕ್ಕಳ ಬಗ್ಗೆ ಚಿಂತಿಸಲು ತೊಡಗುತ್ತಾರೆ. ತಮ್ಮ ಮಕ್ಕಳ ಭವಿಷ್ಯದ ನಿರ್ಮಾಣಕ್ಕಾಗಿ ಅವರು ತಮ್ಮ ಸಂಪೂರ್ಣ ಜೀವನವನ್ನು ಸವೆಸಿ ಶ್ರಮಿಸುತ್ತಾರೆ. ಆದರೆ ಸ್ವತಃ ತಮ್ಮ ಭವಿಷ್ಯದ ನಿರ್ಮಾಣಕ್ಕಾಗಿ ಅವರು ಯಾವುದೇ ಪ್ರಯತ್ನ ಮಾಡುತ್ತಿಲ್ಲ. ಅವರ ವರ್ತನೆ ನೋಡಿದರೆ, ಅವರ ಮರಣಾನಂತರ ಅವರ ಮಕ್ಕಳು ಮಾತ್ರ ಉಳಿಯಲಿದ್ದು, ಸ್ವತಃ ಅವರ ಅಸ್ತಿತ್ವ ಸಂಪೂರ್ಣ ನಾಸ್ತಿಯಾಗಿ ಬಿಡುವುದರಿಂದ, ತಮ್ಮ ಭವಿಷ್ಯಕ್ಕಾಗಿ ಏನನ್ನಾದರೂ ಮಾಡಿಡುವ ಅಗತ್ಯವೇ ಅವರಿಗಿಲ್ಲವೋ ಎಂಬಂತಿದೆ.

ಮರಣಾನಂತರ ಒಂದು ಜೀವನ ಇದೆ ಮತ್ತು ವಾಸ್ತವದಲ್ಲಿ ಜೀವನ ಆರಂಭವಾಗುವುದೇ ಮರಣದ ನಂತರ ಎಂಬ ಪ್ರಜ್ಞೆ ಜನರಲ್ಲಿ ಇಲ್ಲದಿರುವುದೇ ಅವರು ಈ ರೀತಿ ವರ್ತಿಸುವುದಕ್ಕೆ ಕಾರಣ. ಒಂದು ವೇಳೆ ತಾವು ಸತ್ತು ಗೋರಿಯಲ್ಲಿ ದಫನವಾಗುವ ಮೂಲಕ, ನಿಜವಾಗಿ ದಫನವಾಗುವ ಬದಲು ಬೇರೊಂದು ಲೋಕವನ್ನು ಪ್ರವೇಶಿಸುತ್ತಿದ್ದೇವೆ ಎಂಬ ಪ್ರಜ್ಞೆ ಅವರಲ್ಲಿರುತ್ತಿದ್ದರೆ,

ಅವರು ಖಂಡಿತವಾಗಿಯೂ ತಮ್ಮ ಮರಣದ ಆಲೋಚನೆ ಬಂದಾಗ ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ತಲೆ ಕೆಡಿಸಿಕೊಳ್ಳುವ ಬದಲು, "ಮರಣಾನಂತರ ನನ್ನ ಗತಿಯೇನು?" ಎಂದು ಚಿಂತಿಸುತ್ತಿದ್ದರು.

ವಾಸ್ತವದಲ್ಲಿ ಆಧುನಿಕ ಯುಗದ ಹೆಚ್ಚಿನೆಲ್ಲಾ ಮನುಷ್ಯರು, ಅವರು ಧಾರ್ಮಿಕ ವ್ಯಕ್ತಿಗಳಾಗಿರಲಿ ಇತರ ಯಾರೇ ಆಗಿರಲಿ ತಮ್ಮ ಬದುಕು ಮರಣ ದೊಂದಿಗೆ ಕೊನೆಗೊಳ್ಳುವುದಿಲ್ಲ, ಮರಣದ ಮೂಲಕ ತಾವು ಈ ಲೋಕದ ಬದುಕಿಗಿಂತ ಹೆಚ್ಚು ವಾಸ್ತವಿಕವಾದ ಮತ್ತು ಇದಕ್ಕಿಂತ ಹೆಚ್ಚು ಮಹತ್ವವುಳ್ಳ ಶಾಶ್ವತ ಬದುಕೊಂದನ್ನು ಪ್ರವೇಶಿಸುತ್ತಿದ್ದೇವೆ ಎಂಬ ವಿಶ್ವಾಸದಿಂದ ವಂಚಿತ ರಾಗಿದ್ದಾರೆ.

ಮರಣಾನಂತರ ಬರಲಿರುವ ಜೀವನದ ಬಗ್ಗೆ ಸಂದೇಹವುಂಟಾಗಲು ಮುಖ್ಯವಾಗಿ ಎರಡು ಕಾರಣಗಳಿವೆ. ಮೊದಲನೆಯದಾಗಿ, ಪ್ರತಿಯೊಬ್ಬ ಮನುಷ್ಯನು ಸತ್ತ ಬಳಿಕ ಅವನ ಶರೀರ ಮಣ್ಣಲ್ಲಿ ಸೇರಿಕೊಳ್ಳುತ್ತದೆ. ಮನುಷ್ಯನು ಸತ್ತು ಅವನ ಶರೀರ ಮಣ್ಣಾಗಿ ಹೋದ ಬಳಿಕ ಅವನು ಮತ್ತೆ ಹೇಗೆ ಜೀವಂತಗೊಳ್ಳುತ್ತಾನೆ ಎಂಬುದು ನಮಗೆ ಸುಲಭವಾಗಿ ಅರ್ಥವಾಗುವುದಿಲ್ಲ. ಎರಡನೆಯದಾಗಿ ಮರಣಾನಂತರ ಇರುವ ಜಗತ್ತು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಈ ಲೋಕ ಪ್ರತಿಯೊಬ್ಬನಿಗೂ ಕಾಣಿಸುತ್ತಿದೆ. ಆದರೆ ಇದರಾಚೆಗಿನ ಲೋಕ ಯಾರ ಕಣ್ಣಿಗೂ ಬೀಳುವುದಿಲ್ಲ. ಆದ್ದರಿಂದ ಈ ಜೀವನದ ಅನಂತರ ಇನ್ನೊಂದು ಜೀವನ ಇದೆ ಎಂದು ನಂಬಲು ನಮಗೆ ಸಾಧ್ಯವಾಗುವುದಿಲ್ಲ.

ಬನ್ನಿ ನಾವೀಗ ಈ ಎರಡು ಸಂದೇಹಗಳ ಬಗ್ಗೆಯೇ ಚರ್ಚಿಸೋಣ–

## ಮರಣಾನಂತರ ಜೀವನ

"ನಾನು ಸತ್ತು ಮಣ್ಣಾದ ಬಳಿಕ ಮತ್ತೆ ನನ್ನನ್ನು ಜೀವಂತಗೊಳಿಸ ಲಾಗುವುದೇ?" ಈ ಪ್ರಶ್ನೆ ಹೀಗೆಯೇ ಅಲ್ಲದಿದ್ದರೆ ಅಲ್ಪಸ್ವಲ್ಪ ವ್ಯತ್ಯಾಸ ದೊಂದಿಗಾದರೂ ಹೆಚ್ಚಿನೆಲ್ಲಾ ಮನುಷ್ಯರನ್ನು ಕಾಡುತ್ತಿರುತ್ತದೆ. ಮರಣಾನಂತರ ಒಂದು ಶಾಶ್ವತ ಜೀವನ ಇದೆ ಎಂಬ ಸತ್ಯದ ಮೇಲೆ ಆಳವಾದ, ಅಚಲ

ನಂಬಿಕೆ ಇಲ್ಲದ, ಪ್ರತಿಯೊಬ್ಬನ ಮನಸ್ಸಿನಲ್ಲೂ ಈ ಪ್ರಶ್ನೆ ಮನೆಮಾಡಿ ಕೊಂಡಿರುತ್ತದೆ. ತನ್ನ ಇಹಲೋಕ ಜೀವನದಲ್ಲಿ, ಪರಲೋಕದ ಬಗ್ಗೆ ಚಿಂತಿಸದ ಪ್ರತಿಯೊಬ್ಬನೂ ಈ ಮೂಲಕ ಪರಲೋಕ ಜೀವನದ ಬಗ್ಗೆ ತಾನು ಸಂಶಯಗ್ರಸ್ತನಾಗಿರುವೆನೆಂಬುದನ್ನೇ ಸಾರುತ್ತಿದ್ದಾನೆ. ಆತ ಅಧಿಕೃತವಾಗಿ ಈ ಕುರಿತು ಆಲೋಚಿಸುತ್ತಿದ್ದಾನೋ ಇಲ್ಲವೋ ಎಂಬುದು ಬೇರೆ ವಿಷಯ. ಆದರೆ ಅವನ ವರ್ತನೆ ಮಾತ್ರ ಅವನ ಸಂದೇಹವನ್ನಷ್ಟೆ ಪ್ರತಿಬಿಂಬಿಸುತ್ತದೆ.

ಗಂಭೀರವಾಗಿ ಚಿಂತಿಸಿ ನೋಡಿದರೆ ಇದು ನಮಗೆ ಸರಳವಾಗಿ ಅರ್ಥವಾಗ ಬಲ್ಲದು. ಅಲ್ಲಾಹನು ನಮ್ಮನ್ನು ಪರೀಕ್ಷಿಸಬೇಕೆಂಬ ದೃಷ್ಟಿಯಿಂದ, ಮರಣಾನಂತರದ ವಾಸ್ತವಿಕತೆಯನ್ನು ನಮ್ಮ ಕಣ್ಣಿಗೆ ಕಾಣಿಸದಂತೆ ಗುಪ್ತವಾಗಿ ಇಟ್ಟಿರುವನಾದರೂ ಎಲ್ಲವನ್ನೂ ಅರ್ಥ ಮಾಡಿಕೊಳ್ಳಲು ನಮಗೆ ಸಹಾಯಕವಾಗುವ ಅಸಂಖ್ಯ ದೃಷ್ಟಾಂತಗಳು ನಮ್ಮ ಸುತ್ತಮುತ್ತಲಿನ ಜಗತ್ತಿನಲ್ಲೇ ಇದೆ. ಈ ವಿಶ್ವವು ಒಂದು ಕನ್ನಡಿಯಂತಿದ್ದು, ಈ ಕನ್ನಡಿಯಲ್ಲಿ ನಾವು ಇನ್ನೊಂದು ಜಗತ್ತಿನ ಪ್ರತಿಬಿಂಬವನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

ನಾವೆಲ್ಲ ಇಂದು ಯಾವ ರೂಪದಲ್ಲಿ ಇದ್ದೇವೋ ಹಿಂದೆಯೂ ಅದೇ ರೂಪದಲ್ಲಿ ಇರಲಿಲ್ಲ. ಮನುಷ್ಯ ಜೀವನವು ಯಾವ ಬೆಲೆಯೂ ಇಲ್ಲದ ಒಂದು ವೀರ್ಯಾಣುವಿಂದ ಆರಂಭವಾಗುತ್ತದೆ. ಆ ವೀರ್ಯವೇ ತಾಯಿಯ ಗರ್ಭಾಶಯದಲ್ಲಿ ಬೆಳೆದು ಮನುಷ್ಯ ರೂಪ ತಾಳುತ್ತದೆ. ಅನಂತರ ಅಲ್ಲಿಂದ ಹೊರ ಬಂದು ಪೂರ್ಣ ಮನುಷ್ಯ ರೂಪಕ್ಕೆ ಬೆಳೆಯುತ್ತದೆ.

ಕಣ್ಣಿಗೆ ಕಾಣಿಸದಷ್ಟು ಸಣ್ಣ ಗಾತ್ರದ, ನಿಕೃಷ್ಟವಾದ ಸಣ್ಣ ಧಾತುವೊಂದು ಈ ರೀತಿ ಬೆಳೆದು ಐದಾರು ಅಡಿ ಎತ್ತರದ ಮನುಷ್ಯನಾಗಿ ರೂಪುಗೊಳ್ಳುವ ಅದ್ಭುತ ಪ್ರಕ್ರಿಯೆ ಈ ಜಗತ್ತಿನಲ್ಲಿ ನಮ್ಮೆದುರೇ ನಿತ್ಯವೂ ನಡೆಯುತ್ತಲೇ ಇರುತ್ತದೆ. ಹೀಗಿರುವಾಗ ನಮ್ಮ ಶರೀರದ ವಿವಿಧ ಅಂಶಗಳೆಲ್ಲಾ ಅತ್ಯಂತ ಸೂಕ್ಷ್ಮ ಅಣುಗಳ ರೂಪದಲ್ಲಿ ಮಣ್ಣಿನಲ್ಲಿ ಹರಡಿದ ಬಳಿಕ ಅವುಗಳನ್ನೆಲ್ಲಾ ಒಟ್ಟುಗೂಡಿಸಿ ಮತ್ತೆ ಪೂರ್ಣ ಮನುಷ್ಯ ರೂಪ ಕೊಡುವುದು ಯಾಕೆ ಅಸಾಧ್ಯ?

ನಾವಿಂದು ಕಾಣುತ್ತಿರುವ ಈ ಓಡಾಡುವ ಮಾನವ, ನಿಜವಾಗಿ ಮನುಷ್ಯ ರೂಪ ತಳೆದ ಅಸಂಖ್ಯ ಅಣುಗಳ ಸಂಗಮ. ನಮ್ಮ ಭೂಮಿ ಮತ್ತು ವಾತಾವರಣದಲ್ಲಿ ಎಲ್ಲೆಲ್ಲೋ ಹರಡಿಕೊಂಡಿದ್ದ ಈ ಅಣುಗಳನ್ನು ಅನ್ನ, ನೀರು, ಗಾಳಿ ಮುಂತಾದ ನಾವು ಸೇವಿಸುವ ವಸ್ತುಗಳು ಒಂದೊಂದಾಗಿ ತಂದು ಒಂದು ಮನುಷ್ಯ ಅಸ್ತಿತ್ವದಲ್ಲಿ ವಿಲೀನಗೊಳಿಸಿದವು. ಈ ರೀತಿ ವಿಚ್ಛಿನ್ನ ಅಣುಗಳ ಸಂಗಮವನ್ನೇ ನಾವು ಓಡಾಡುವ ಮನುಷ್ಯನ ರೂಪದಲ್ಲಿ ಕಾಣುತ್ತೇವೆ.

ಇದೇ ಕ್ರಿಯೆಯು ಇನ್ನೊಮ್ಮೆ ನಡೆಯಲಿಕ್ಕಿದೆ. ನಾವು ಸತ್ತ ಬಳಿಕ ನಮ್ಮ ಶರೀರದ ವಿವಿಧ ಧಾತುಗಳು ಮಣ್ಣಿನಲ್ಲೂ ನೀರಿನಲ್ಲೂ ಗಾಳಿಯಲ್ಲೂ ಹರಡಿ ಕೊಳ್ಳುತ್ತವೆ. ಅನಂತರ ದೇವನ ಆದೇಶವಾದಾಗ ಅವೆಲ್ಲವೂ ಮೊದಲ ಸಲ ಒಟ್ಟು ಸೇರಿ ಶರೀರದ ರೂಪ ತಾಳಿದಂತೆ ಎರಡನೆಯ ಬಾರಿಯೂ ಒಂದು ಗೂಡಿ ಶರೀರದ ರೂಪವನ್ನು ಪಡೆಯುವುವು. ಒಮ್ಮೆ ನಡೆದಿರುವ ಘಟನೆಯೇ ಇನ್ನೊಮ್ಮೆ ನಡೆಯುವುದು ಅಂತಹ ಆಶ್ಚರ್ಯಕರ ಸಂಗತಿಯೇನೂ ಅಲ್ಲ.

ಈ ಜೀವನ ಮತ್ತೆ ಪುನರಾವರ್ತಿಸಲು ಸಾಧ್ಯ ಎಂಬ ಸತ್ಯವನ್ನು ಸೂಚಿ ಸುವ ಉದಾಹರಣೆಗಳು ಈ ಭೌತಿಕ ಪ್ರಪಂಚದಲ್ಲೇ ಸಾಕಷ್ಟು ಕಾಣಸಿಗುತ್ತವೆ.

ಪ್ರತಿ ವರ್ಷ ಮಳೆಗಾಲದಲ್ಲಿ ಭೂಮಿಯಲ್ಲಿ ಹಸಿರು ಅರಳುವುದನ್ನು, ಕಣ್ಣೋಡಿಸುವ ಕಡೆಯೆಲ್ಲಾ ಹಸಿರೇ ತುಂಬಿ ಹೋಗುವುದನ್ನು ನಾವು ಕಾಣುತ್ತೇವೆ. ಆದರೆ ಬೇಸಿಗೆ ಈ ಹಸಿರನ್ನೆಲ್ಲಾ ನಾಶ ಮಾಡುತ್ತದೆ, ನೆಲವೆಲ್ಲಾ ಒಣಗಿ ಬಿಡುತ್ತದೆ, ಹಸಿರೇ ತುಂಬಿ ತುಳುಕುತ್ತಿದ್ದಂತಹ ಸುಂದರ ಬಯಲುಗಳು ಬರಡಾಗಿ ಬಣಗುಟ್ಟ ತೊಡಗುತ್ತವೆ. ಈ ರೀತಿ ಅರಳಿದ ಜೀವ ಸಾಯುತ್ತದೆ. ಆದರೆ ಮುಂದಿನ ವರ್ಷ ಮಳೆಗಾಲ ಬಂದಾಗ, ಮಳೆ ಸುರಿದಾಗ ಒಣಗಿದ ಭೂಮಿ ಪುನಃ ಕಂಗೊಳಿಸತೊಡಗುತ್ತದೆ. ಇದೇ ರೀತಿ ಮನುಷ್ಯನನ್ನೂ ಅವನು ಸತ್ತ ಬಳಿಕ ಮತ್ತೆ ಜೀವಂತಗೊಳಿಸಲಾಗುವುದು.

ಇನ್ನೊಂದು ದೃಷ್ಟಿಕೋನದಿಂದ ನೋಡುವುದಾದರೆ, ಮರಣಾನಂತರ ಜೀವನದ ಬಗ್ಗೆ ನಮ್ಮಲ್ಲಿ ಸಂದೇಹಗಳುಂಟಾಗಲು ಒಂದು ಮುಖ್ಯ ಕಾರಣ

ಏನೆಂದರೆ, ನಾವು ನಮ್ಮನ್ನು ಕೇವಲ ನಮ್ಮ ಬಾಹ್ಯವಾದ ಶಾರೀರಿಕ ಅಸ್ತಿತ್ವದ ಸೀಮೆಯೊಳಗೇ ಕಲ್ಪಿಸಿಕೊಳ್ಳುತ್ತೇವೆ. ಹೊರಗೆ ಕಾಣುವ ಈ ಶರೀರವೇ ನಿಜವಾದ ಮನುಷ್ಯನೆಂದು ಭಾವಿಸುವ ನಾವು, ಈ ಶರೀರ ಸತ್ತು ಮಣ್ಣಲ್ಲಿ ಕರಗಿ ಹೋದ ಬಳಿಕ ಅದಕ್ಕೆ ಮತ್ತೆ ಶರೀರದ ರೂಪ ಕೊಡುವುದು ಹೇಗೆ ಎಂದು ನಾವು ಯೋಚಿಸುತ್ತೇವೆ.

ಒಬ್ಬ ಜೀವಂತ ವ್ಯಕ್ತಿ ಸಾಯುತ್ತಾನೆ. ಸತ್ತೊಡನೆ ಅವನ ಮಾತುಕತೆ, ಇತರ ಚಟುವಟಿಕೆಗಳು ಎಲ್ಲಾ ಸ್ತಬ್ದವಾಗಿ ಬಿಡುತ್ತವೆ. ಅವನ ಸಾಮರ್ಥ್ಯಗಳೆಲ್ಲಾ ನಾಶವಾಗುತ್ತವೆ. ಅನಂತರ ಅವನನ್ನು ಭೂಮಿಯಲ್ಲಿ ಹೂಳಲಾಗುತ್ತದೆ, ಕೆಲವರು ಆ ಶವವನ್ನು ಸುಟ್ಟು, ಬೂದಿಯನ್ನು ನದಿಗಳಲ್ಲಿ ಹರಿಸಿ ಬಿಡುತ್ತಾರೆ. ಕೆಲವೇ ದಿನಗಳಲ್ಲಿ ಅವನ ಶರೀರ ನಿರ್ನಾಮವಾಗಿ ಬಿಡುತ್ತದೆ. ಅವನ ಅಸ್ತಿತ್ವ ಎಲ್ಲೂ ಕಾಣ ಸಿಗುವುದಿಲ್ಲ. ಜೀವಂತ ಮನುಷ್ಯರು ಈ ರೀತಿ ಹೇಳ ಹೆಸರಿಲ್ಲದಂತಾಗುವುದನ್ನು ನಾವು ನಿತ್ಯ ನೋಡುತ್ತೇವೆ. ಈ ರೀತಿ 'ಇಲ್ಲ'ವಾದ ಮನುಷ್ಯ ಪುನಃ ಅಸ್ತಿತ್ವ ಪಡೆಯುವುದು ಹೇಗೆ ಎಂದು ನಮಗೆ ಅರ್ಥವಾಗುವುದಿಲ್ಲ.

ಆದರೆ ವಾಸ್ತವದಲ್ಲಿ ನಮ್ಮ ನಿಜವಾದ ಅಸ್ತಿತ್ವವಿರುವುದು ಕಣ್ಣಿಗೆ ಕಾಣಿಸುವ ಈ ಶರೀರದಲ್ಲಿ ಅಲ್ಲ. ನಿಜವಾಗಿ ಅಸ್ತಿತ್ವದಲ್ಲಿ ಇರುವ 'ಮನುಷ್ಯ' ಬಹಿರಂಗದಲ್ಲಿರದೆ ಅಂತರಂಗದಲ್ಲಿರುವುದರಿಂದ ಅವನು ಕಣ್ಣಿಗೆ ಕಾಣಿಸುವುದಿಲ್ಲ. ಆಲೋಚಿಸುವ, ದೇಹವನ್ನು ಚಲಿಸುವ ಮತ್ತು ಶರೀರವನ್ನು ಜೀವಂತವಿಡುವ ಈ ಕೆಲಸವನ್ನು ಈ ಒಳಗಿನ ಮನುಷ್ಯನೇ ಮಾಡುತ್ತಾನೆ. ಅವನು ಹೊರಟು ಹೋದರೆ ಶರೀರವೇನೋ ಇರುತ್ತದೆ, ಆದರೆ ಆ ಶರೀರ ನಿರ್ಜೀವವಾಗಿರುತ್ತದೆ, ಜೀವದ ಯಾವ ಲಕ್ಷಣವೂ ಅದರಲ್ಲಿರುವುದಿಲ್ಲ.

ವಾಸ್ತವದಲ್ಲಿ 'ಮನುಷ್ಯ' ಎಂಬುದು ಯಾವುದಾದರೂ ಶರೀರದ ಹೆಸರಲ್ಲ. ಅದು ಶರೀರದೊಳಗಿರುವ 'ಆತ್ಮ'ದ ಹೆಸರು. ಶರೀರವನ್ನು ಹಲವು ಸೂಕ್ಷ್ಮಾತಿಸೂಕ್ಷ್ಮ ಜೀವಕಣ(Living cells)ಗಳನ್ನು ಸೇರಿಸಿ ರಚಿಸಲಾಗಿದೆ

ಎಂಬುದು ನಮಗೆ ತಿಳಿದಿದೆ. ಒಂದು ಕಟ್ಟಡದ ರಚನೆಯಲ್ಲಿ ಇಟ್ಟಿಗೆಗೆ ಇರುವ ಸ್ಥಾನವೇ ಶರೀರದ ರಚನೆಯಲ್ಲಿ ಈ ಜೀವಕಣಗಳಿಗೆ ಇದೆ. ನಮ್ಮ ಶರೀರವೆಂಬ ಕಟ್ಟಡದ ಈ ಇಟ್ಟಿಗೆಗಳು, ನಾವು ಚಟುವಟಿಕೆಯಲ್ಲಿರುವಾಗ ನಿರಂತರ ನಾಶವಾಗುತ್ತಾ ಇರುತ್ತವೆ. ಇದರಿಂದ ಉಂಟಾಗುವ ಕೊರತೆಯನ್ನು ನಾವು ಆಹಾರ ಸೇವನೆಯ ಮೂಲಕ ತುಂಬಿ ಕೊಳ್ಳುತ್ತೇವೆ. ಆಹಾರವು ಜೀರ್ಣವಾದ ಬಳಿಕ ಮತ್ತೆ ಹೊಸ ಜೀವಕಣಗಳನ್ನು ಉತ್ಪಾದಿಸುವ ಮೂಲಕ ಶರೀರಕ್ಕಾದ ನಷ್ಟವನ್ನು ನೀಗಿಸುತ್ತದೆ. ಈ ರೀತಿ ನಮ್ಮ ಶರೀರವು ನಿರಂತರವಾಗಿ ಕರಗುತ್ತಾ ತುಂಬಿಕೊಳ್ಳುತ್ತಾ ಬದಲಾಗುತ್ತಾ ಇರುತ್ತದೆ. ಕೆಲವು ಸಮಯದಲ್ಲಿ ಸಂಪೂರ್ಣ ದೇಹವೇ ಬದಲಾಗಿ ಬಿಡುವುದುಂಟು.

ಈ ಕ್ರಿಯೆಯು ಸರಾಸರಿ 10 ವರ್ಷಗಳಲ್ಲಿ ಪೂರ್ತಿಗೊಳ್ಳುತ್ತದೆ. ಅಂದರೆ, ಹತ್ತು ವರ್ಷಗಳ ಹಿಂದೆ ಇದ್ದ ನಿಮ್ಮ ಶರೀರದಲ್ಲಿ ಇಂದು ಏನೂ ಉಳಿದಿಲ್ಲ ಎಂದಾಯಿತು. ಇಂದು ಇರುವ ನಿಮ್ಮ ಶರೀರ ಹೊಸ ಶರೀರವಾಗಿದೆ. ಹತ್ತು ವರ್ಷಗಳ ಅವಧಿಯಲ್ಲಿ ನಿಮ್ಮ ದೇಹದಿಂದ ಬೇರ್ಪಟ್ಟ ಕಣಗಳನ್ನು ಸಂಪೂರ್ಣವಾಗಿ ಒಂದು ಗೂಡಿಸಲು ಸಾಧ್ಯವಾದರೆ ನಿಮ್ಮಂತೆಯೇ ಇರುವ ಇನ್ನೊಬ್ಬ ಮನುಷ್ಯನನ್ನು ರಚಿಸಬಹುದು. ನಿಮ್ಮ ವಯಸ್ಸು ನೂರು ವರ್ಷ ಎಂದಾದರೆ ನಿಮ್ಮಂತೆಯೇ ಇರುವ ಹತ್ತು ಮನುಷ್ಯರನ್ನು ತಯಾರಿಸಬಹುದು. ಅವರೆಲ್ಲಾ ನೋಡಲು ನಿಮ್ಮಂತೆಯೇ ಇರಬಹುದಾದರೂ ಅವು ಕೇವಲ ನಿರ್ಜೀವ ಶರೀರಗಳು. ಅವುಗಳ ಒಳಗೆ 'ನೀವು' ಇಲ್ಲ. ಏಕೆಂದರೆ ನೀವು ಬೇರೊಂದು ಶರೀರದೊಳಗೆ ಇದ್ದೀರಿ.

ಈ ರೀತಿ ನಿಮ್ಮ ಶರೀರ ಬದಲಾಗುತ್ತಾ ಇದ್ದರೂ ನೀವು ಬದಲಾಗು ವುದಿಲ್ಲ. ನೀವು ಯಾವುದನ್ನು 'ನಾನು' ಎನ್ನುತ್ತೀರೋ ಅದು ಹಾಗೆಯೇ ಇರುತ್ತದೆ. ಹತ್ತು ವರ್ಷ ಹಿಂದೆ ನೀವು ಯಾರ ಜೊತೆಗಾದರೂ ಒಂದು ಒಪ್ಪಂದ ಮಾಡಿದ್ದರೆ, ಆ ಒಪ್ಪಂದವನ್ನು 'ನಾನು' ಮಾಡಿದ್ದೆಂಬುದನ್ನು ನೀವು ಯಾವಾಗಲೂ ಒಪ್ಪುತ್ತೀರಿ. ನಿಜವಾಗಿ ಅಂದಿನ ಆ ಶರೀರ ಇಂದು ಉಳಿದಿಲ್ಲ. ಅಂದು ಒಪ್ಪಂದಕ್ಕೆ ಸಹಿ ಹಾಕಿದ್ದರೆ ಆ ಕೈಗಳು ನಿಮ್ಮ ಶರೀರದಲ್ಲಿ

ಇಲ್ಲ. ಹಾಗೆಯೇ ಒಪ್ಪಂದದ ಕುರಿತು ಅಂದು ಮಾತನಾಡಿದ ನಾಲಿಗೆಯೂ ಇಂದು ನಿಮ್ಮ ಜೊತೆ ಇಲ್ಲ. ಎಲ್ಲವೂ ಬದಲಾಗಿದೆ. ಆದರೆ 'ನೀವು' ಇಂದಿಗೂ ಹಾಗೆಯೇ ಇರುವಿರಿ. ಆದ್ದರಿಂದಲೇ ಹತ್ತು ವರ್ಷ ಹಿಂದಿನ ಒಪ್ಪಂದ ನೀವೇ ಮಾಡಿದ್ದೆಂಬುದನ್ನು ಮತ್ತು ನೀವು ಆ ಒಪ್ಪಂದಕ್ಕೆ ಬದ್ಧರೆಂಬುದನ್ನು ನೀವು ಒಪ್ಪುತ್ತೀರಿ.

ಶರೀರದೊಂದಿಗೆ ಬದಲಾಗದೆ, ಶರೀರ ಎಷ್ಟು ಸಲ ಬದಲಾದರೂ ತನ್ನನ್ನು ಉಳಿಸಿಕೊಳ್ಳುವ ಈ 'ಆತ್ಮ'ವೇ ನಿಜವಾದ ಮನುಷ್ಯ.

ಶರೀರ ನಾಶವಾಗುವಾಗ ಅದರ ಜೊತೆಗೇ ನಾಶವಾಗುತ್ತಾನೆ ಎನ್ನಲು, 'ಮನುಷ್ಯ' ಎಂಬುದು ಒಂದು ಶರೀರದ ಹೆಸರಲ್ಲ. ಅವನು ದೇಹಕ್ಕಿಂತ ಮಿಗಿಲಾದ ಒಂದು ಸ್ವತಂತ್ರ ಅಸ್ತಿತ್ವವಿರುವ ಮಾತ್ರವಲ್ಲ, ದೇಹ ನಾಶವಾದರೂ ತಾನು ನಾಶವಾಗದ 'ಆತ್ಮ' ಎಂಬುದು ಮೇಲಿನ ವಾದದಿಂದ ಸ್ಪಷ್ಟವಾದಂತಾಯಿತು. ಹಾಗೆಯೇ ಶರೀರ ನಶ್ವರ ಆದರೆ ಆತ್ಮ ನಶ್ವರವಲ್ಲ ಎಂಬ ಸತ್ಯವೂ ಇಲ್ಲಿ ವ್ಯಕ್ತವಾಗಿ ಗೋಚರಿಸುತ್ತದೆ.

ಕೆಲವು ಭೌತಿಕ ವಸ್ತುಗಳ ಸಮಾಗಮ ಮತ್ತು ವಿಚ್ಛೇದನವೇ ಜೀವನ ಮತ್ತು ಮರಣವೆಂದು ಕೆಲವರು ವಾದಿಸುವುದುಂಟು. ಅವರ ಪ್ರಕಾರ ಈ ವಸ್ತುಗಳು ಒಟ್ಟು ಸೇರಿದಾಗ ಜೀವ ಉಂಟಾಗುತ್ತದೆ, ಅವು ಬೇರ್ಪಟ್ಟಾಗ ಮರಣ ಸಂಭವಿಸುತ್ತದೆ. ಆದರೆ ಇದೊಂದು ಆಧಾರವಿಲ್ಲದ ವಾದ. ಈ ವಾದವನ್ನು ವೈಜ್ಞಾನಿಕವೆನ್ನುವಂತಿಲ್ಲ. ಒಂದು ವೇಳೆ ಈ ವಾದದ ಪ್ರಕಾರ ಜೀವನವು ಕೇವಲ ಕೆಲವು ಭೌತಿಕ ವಸ್ತುಗಳ ಸಮಾಗಮದ ಪರಿಣಾಮವಾಗಿದ್ದರೆ, ಆ ಸಮಾಗಮವು ಅಸ್ತಿತ್ವದಲ್ಲಿರುವ ತನಕ ಶರೀರ ಜೀವಂತವಾಗಿರಬೇಕಿತ್ತು. ಹಾಗೆಯೇ ಯಾರಾದರೊಬ್ಬ ಬುದ್ಧಿವಂತ ವಿಜ್ಞಾನಿಗೆ ಆ ವಸ್ತುಗಳ ಸಮಾಗಮವನ್ನು ತಾನೇ ಏರ್ಪಡಿಸಿ ಒಂದು ಜೀವವನ್ನು ಸೃಷ್ಟಿಸಲು ಸಾಧ್ಯವಾಗಬೇಕಿತ್ತು. ಆದರೆ ಇವೆರಡೂ ಅಸಾಧ್ಯ ಎಂದು ನಮಗೆಲ್ಲಾ ಚೆನ್ನಾಗಿ ಗೊತ್ತು.

ಎಲ್ಲ ಜನರೂ ಕೇವಲ ಅಪಘಾತಗಳಿಂದ, ತಮ್ಮ ಶರೀರವೆಲ್ಲಾ ನುಜ್ಜುಗುಜ್ಜಾದುದರಿಂದ ಮಾತ್ರ ಸಾಯುವುದಲ್ಲ. ಜನರು ಬೇರೆಬೇರೆ ಸ್ಥಿತಿಯಲ್ಲಿ

ಸಾಯುತ್ತಾರೆ. ವಯಸ್ಸಿನ ಮಿತಿ ಇಲ್ಲದೆ ಎಲ್ಲ ವಯಸ್ಸಿನವರೂ ಕೆಲವೊಮ್ಮೆ ಬಹಳ ಆರೋಗ್ಯವಂತ ವ್ಯಕ್ತಿಗಳೂ ಹೃದಯಬಡಿತ ನಿಂತ ಕಾರಣದಿಂದ ಹಠಾತ್ತನೆ ಸಾಯುತ್ತಾರೆ. ಹಠಾತ್ತನೆ ಹೀಗೇಕಾಯಿತು ಎಂಬುದನ್ನು ವಿಶ್ಲೇಷಿಸಲು ಯಾವ ವೈದ್ಯನಿಗೂ ಸಾಧ್ಯವಾಗುವುದಿಲ್ಲ. ಹಾಗೆಯೇ ಒಬ್ಬ ವ್ಯಕ್ತಿ ಸತ್ತ ಬಳಿಕ ಅವನ ಶರೀರ ಬಹಳ ಹೊತ್ತಿನ ವರೆಗೆ ಯಥಾಸ್ಥಿತಿಯಲ್ಲಿ ಇರುವುದನ್ನು ಅಂದರೆ ಯಾವ ಭೌತಿಕ ವಸ್ತುಗಳ ಸಮಾಗಮದಿಂದ ದೇಹದ ರಚನೆಯಾಗಿತ್ತೋ ಆ ಸಮಾಗಮವು ಯಥಾ ರೀತಿ ಅಸ್ತಿತ್ವದಲ್ಲಿರುವುದನ್ನು ನಾವು ಕಾಣುತ್ತೇವೆ, ಆದರೆ ಆ ಶರೀರದೊಳಗಿದ್ದ ಆತ್ಮ ಮಾತ್ರ ಹೊರಟು ಹೋಗಿರುತ್ತದೆ. ಭೌತಿಕ ಧಾತುಗಳ ಸಂಗಮವು ಕೆಲವು ನಿಮಿಷ ಮುಂಚೆ, ಆ ವ್ಯಕ್ತಿ ಜೀವಂತ ಇದ್ದಾಗ ಇದ್ದಂತೆಯೇ ಉಳಿದುಕೊಂಡಿರುತ್ತದೆ. ಅದರೆ ಜೀವ ಮಾತ್ರ ಉಳಿದಿರುವುದಿಲ್ಲ. ಜೀವನ ಕೇವಲ ಕೆಲವು ಭೌತಿಕ ಧಾತುಗಳ ಸಂಗಮವಾಗಿರದೆ, ಅದಕ್ಕೆ ತನ್ನದಾದ ಒಂದು ಸ್ವತಂತ್ರ ಅಸ್ತಿತ್ವ ಇದೆ ಎಂಬುದು ಇದರಿಂದ ರುಜುವಾಗುತ್ತದೆ.

ನಾವು ಶರೀರದ ಚಿತ್ರವನ್ನು ರಚಿಸಬಹುದಾದರೂ ಜಗತ್ತಿನ ಯಾವುದೇ ಪ್ರಯೋಗಾಲಯದಲ್ಲಿ ಒಬ್ಬ ಜೀವಂತ ಮನುಷ್ಯನನ್ನು ರಚಿಸಲು ಸಾಧ್ಯವಿಲ್ಲ. ಶರೀರವನ್ನು ಹಲವು ಸಾಮಾನ್ಯ ರಾಸಾಯನಿಕ ಅಣುಗಳಿಂದ ರಚಿಸಲಾಗಿದೆ ಯೆಂದು ಈಗಾಗಲೇ ನಾವು ತಿಳಿದೆವು. ಈ ಶರೀರದಲ್ಲಿರುವ ಕಾರ್ಬನ್ ನಾವು ಸಾಮಾನ್ಯ ಮಸಿಯಲ್ಲಿ ಕಾಣುವಂತಹದೇ ಕಾರ್ಬನ್ ಆಗಿರುತ್ತದೆ. ಹಾಗೆಯೇ ಶರೀರದಲ್ಲಿರುವ ಹೈಡ್ರೋಜನ್ ಮತ್ತು ಆಕ್ಸಿಜನ್ ಕೂಡಾ ಸಾಮಾನ್ಯ ನೀರಿನಲ್ಲಿ ಇರುವವುಗಳೇ. ನೈಟ್ರೋಜನ್ ಕೂಡಾ ಗಾಳಿಯಲ್ಲಿ ಇರುವಂತಹ ಸ್ವರೂಪದ್ದೇ. ಹಾಗೆಯೇ ಇತರ ವಸ್ತುಗಳೂ. ಆದರೆ ಒಬ್ಬ ಜೀವಂತ ಮನುಷ್ಯ ಕೇವಲ ಅಸಾಮಾನ್ಯವಾಗಿ ಜೋಡಿಸಲ್ಪಟ್ಟ ಇಂತಹ ಸಾಮಾನ್ಯ ಅಣುಗಳ ಸಂಗಮ ಮಾತ್ರವೇ?

ಮನುಷ್ಯನನ್ನು ಇಂತಿಂತಹ ವಸ್ತುಗಳಿಂದ ರಚಿಸಲಾಗಿದೆ ಎಂಬುದು ವಿಜ್ಞಾನಿಗಳಿಗೆ ತಿಳಿದಿದ್ದರೂ ಅದೇ ವಸ್ತುಗಳನ್ನು ಜೋಡಿಸಿ ಒಂದು ಜೀವ

ವನ್ನು ರಚಿಸಲು ತಮ್ಮಿಂದ ಸಾಧ್ಯವಿಲ್ಲ ಎಂಬುದನ್ನು ಅವರು ಒಪ್ಪುತ್ತಾರೆ. ಅಂದರೆ ಜೀವಂತ ವ್ಯಕ್ತಿಯೊಬ್ಬನ ಶರೀರ ಕೇವಲ ಜೀವವಿಲ್ಲದ ಅಣುಗಳ ಸಂಗಮವಾಗಿರದೆ, ಅವನು ಅಣು ಮತ್ತು ಜೀವ ಇವೆರಡರ ಸಂಗಮವಾಗಿದ್ದಾನೆ. ಅವನಿಗೆ ಮರಣ ಬಂದೊಡನೆ ಅಣುಗಳ ಸಂಗ್ರಹವಾದ ಶರೀರ ಮಾತ್ರ ನಮ್ಮ ಮಧ್ಯೆ ಉಳಿದು ಜೀವ ಅಥವಾ ಪ್ರಾಣವು ಅವನಿಂದ ಬೇರ್ಪಟ್ಟು ಬೇರೊಂದು ಜಗತ್ತಿಗೆ ಹೊರಟು ಹೋಗುತ್ತದೆ.

ಜೀವನ ಅಳಿದು ಹೋಗುವ ವಸ್ತುವಲ್ಲ. ಅದು ಶಾಶ್ವತ ಸ್ವರೂಪದ್ದು ಎಂಬುದು ಮೇಲಿನ ವಿವರಣೆಯಿಂದ ಸ್ಪಷ್ಟವಾಯಿತು. ಮರಣೋತ್ತರ ಜೀವನದ ಸಿದ್ಧಾಂತವು ಎಷ್ಟು ಸ್ವಾಭಾವಿಕ ಹಾಗೂ ತರ್ಕಬದ್ಧ ಎಂಬುದು ಕೂಡಾ ಇದರಿಂದ ತಿಳಿದಂತಾಗುತ್ತದೆ. ನಿಜವಾಗಿ ಮೇಲೆ ಪ್ರಸ್ತಾವಿಸಲಾದ ವಾಸ್ತವಿಕತೆಗಳೆಲ್ಲಾ, ಈ ಜೀವನವೇ ಸರ್ವಸ್ವವಲ್ಲ ಮರಣದ ಬಳಿಕವೂ ಜೀವಿಸಲಿಕ್ಕಿದೆ ಎಂದು ಸಾರಿಸಾರಿ ಹೇಳುತ್ತಿವೆ. ಈ ಜಗತ್ತು ಮತ್ತು ಇದರ ಆಯುಷ್ಯ ಬಹಳ ಸೀಮಿತ ಮತ್ತು ನಶ್ವರ. ಆದರೆ ಮನುಷ್ಯನು ಮಾತ್ರ ಈ ಜಗತ್ತಿನ ಅಂತ್ಯದ ಬಳಿಕವೂ ತಾನು ಅಂತ್ಯಗೊಳ್ಳದೆ ಅಸ್ತಿತ್ವದಲ್ಲಿರುತ್ತಾನೆ ಎಂಬುದನ್ನು ಬುದ್ಧಿಯೂ ಒಪ್ಪುತ್ತದೆ. ನಾವು ಸಾಯುವಾಗ ಆ ಮೂಲಕ ನಾಶವಾಗುವುದಿಲ್ಲ. ಬದಲಾಗಿ ಜೀವಂತ ಇರಲಿಕ್ಕಾಗಿ ಬೇರೊಂದು ಲೋಕಕ್ಕೆ ಹೋಗುತ್ತೇವೆ ಅಷ್ಟೇ. ಈ ರೀತಿ ನಮ್ಮ ಇಹಲೋಕದ ಈ ಜೀವನವು ನಿಜವಾಗಿ ನಮ್ಮ ದೀರ್ಘವೂ ನಿರಂತರವೂ ಆಗಿರುವ ಆಯುಷ್ಯದ ಒಂದು ಸಣ್ಣ ಭಾಗ ಮಾತ್ರವಾಗಿದೆ.

## ಪರಲೋಕ

ಪ್ರಸ್ತುತ 'ಇನ್ನೊಂದು ಲೋಕ' ಅಥವಾ ಪರಲೋಕದ ಜೀವನ ಹೇಗಿರಬಹುದು? ಅಲ್ಲಾಹನ ಸಂದೇಶವಾಹಕರು(ಸ) ಹೇಳುವಂತೆ ಅಲ್ಲಿ ಸ್ವರ್ಗ-ನರಕಗಳಿವೆ. ಈ ಜಗತ್ತಿನಲ್ಲಿ ಸಾಯುವ ಪ್ರತಿಯೊಬ್ಬನೂ ಅವರೆಡರ ಪೈಕಿ ಒಂದನ್ನು ಪ್ರವೇಶಿಸುತ್ತಾನೆ. ಈ ಲೋಕದಲ್ಲಿ ದೇವಾಜ್ಞೆಗಳನ್ನು

ಪಾಲಿಸುತ್ತಾ ಬಹಳ ಉತ್ತಮ ಕರ್ಮಗಳನ್ನು ಮಾಡುತ್ತಾ ಬದುಕಿದವನಿಗೆ ಸ್ವರ್ಗದಲ್ಲಿ ಅತ್ಯಂತ ಸುಖಮಯವಾದ ಸ್ಥಾನ ಸಿಗುವುದು. ಅಲ್ಲಾಹನ ಆಜ್ಞೋಲ್ಲಂಘನೆ ಮಾಡುತ್ತಾ ದುಷ್ಟನಾಗಿ ಬಾಳಿದವನನ್ನು ನರಕದ ಘೋರ ಯಾತನೆಗೆ ಗುರಿಪಡಿಸಲಾಗುವುದು.

ಇದನ್ನು ಅರ್ಥೈಸಲು, ಈ ಕೆಳಗಿನ ಅಂಶವನ್ನು ಗಮನಿಸಿರಿ–

ಮನುಷ್ಯನು ಮಾಡುವ ಪ್ರತಿಯೊಂದು ಕೆಲಸಕ್ಕೂ ಎರಡು ಮುಖ ಗಳಿರುತ್ತವೆ. ಮೊದಲನೆಯದಾಗಿ, ಆ ಕೆಲಸವು ಒಂದು ಘಟನೆಯಾಗಿರುತ್ತದೆ; ಎರಡನೆಯದಾಗಿ, ಆ ಕೆಲಸವನ್ನು ಒಂದು ವಿಶಿಷ್ಟ ಉದ್ದೇಶದೊಂದಿಗೆ ಮಾಡಲಾಗಿರುತ್ತದೆ. ಮೊದಲನೆಯದನ್ನು ನಾವು 'ಘಟನಾತ್ಮಕ'ವೆಂದೂ ಎರಡನೆಯದನ್ನು 'ಉದ್ದೇಶಾತ್ಮಕ' ಎಂದೂ ಕರೆಯಬಹುದು.

ಉದಾಹರಣೆಗೆ, ಒಂದು ಮರದ ಮೇಲೆ ಒಂದು ಕಲ್ಲು ಸಿಕ್ಕಿ ಬಿದ್ದಿದೆ. ನೀವು ಆ ಮರದ ಕೆಳಗಿನಿಂದ ಹಾದು ಹೋಗುತ್ತಿರುವಾಗ ಆ ಕಲ್ಲು ಹಠಾತ್ತನೆ ಉರುಳಿ ನಿಮ್ಮ ತಲೆಯ ಮೇಲೆ ಬೀಳುತ್ತದೆ. ನಿಮ್ಮ ತಲೆ ಗಾಯ ಗೊಳ್ಳುತ್ತದೆ. ಆದರೆ ನೀವು ಆ ಕಾರಣಕ್ಕಾಗಿ ಆ ಮರದ ಜೊತೆ ಜಗಳಕ್ಕೆ ನಿಲ್ಲುವುದಿಲ್ಲ. ಮರದ ಮೇಲೆ ಕೋಪಗೊಳ್ಳುವುದಿಲ್ಲ. ಮರುಮಾತಾಡದೆ ಅಲ್ಲಿಂದ ಹೊರಟು ಹೋಗುತ್ತೀರಿ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಒಬ್ಬ ವ್ಯಕ್ತಿ ಉದ್ದೇಶಪೂರ್ವಕವಾಗಿ ನಿಮ್ಮ ಮೇಲೆ ಕಲ್ಲೆಸೆದು, ಅದರಿಂದ ನೀವು ಗಾಯ ಗೊಂಡರೆ ನೀವು ಸುಮ್ಮನಿರುವುದಿಲ್ಲ. ಅವನನ್ನು ತರಾಟೆಗೆ ತೆಗೆದುಕೊಳ್ಳುತ್ತೀರಿ. ಅವನು ನಿಮ್ಮನ್ನು ಗಾಯಗೊಳಿಸಿದಂತೆ ಅವನನ್ನೂ ಗಾಯಗೊಳಿಸಬೇಕೆಂದು ಬಯಸುತ್ತೀರಿ. ಮರ ಮತ್ತು ಮನುಷ್ಯನ ಮಧ್ಯೆ ಈ ತಾರತಮ್ಯವೇಕೆ? ಮರ ದೊಂದಿಗೆ ಪ್ರತೀಕಾರ ತೀರಿಸಲು ಅಪೇಕ್ಷಿಸದ ನೀವು, ಮನುಷ್ಯನೊಂದಿಗೆ ಪ್ರತೀಕಾರ ತೀರಿಸಬೇಕೆಂದು ಆಗ್ರಹಿಸುವುದೇಕೆ? ಮನುಷ್ಯನಿಗೆ ಇರುವಂತಹ ಬುದ್ಧಿ, ಪ್ರಜ್ಞೆಗಳಾವುವೂ ಮರಕ್ಕೆ ಇಲ್ಲ ಎಂಬುದೇ ಈ ವ್ಯತ್ಯಾಸಕ್ಕೆ ಕಾರಣ. ಮರದಿಂದ ಸಂಭವಿಸಿದ್ದು ಕೇವಲ ಒಂದು ಘಟನೆ. ಆದರೆ ಮನುಷ್ಯನಿಂದ

ಸಂಭವಿಸಿದ್ದು ಘಟನೆ ಮಾತ್ರ ಅಲ್ಲ, ಅದರ ಜೊತೆ ಉದ್ದೇಶ ಮತ್ತು ಸಂಕಲ್ಪವೂ ಇದೆ.

ಇದರಿಂದ ತಿಳಿಯುವಂತೆ, ಮನುಷ್ಯನ ಕರ್ಮಗಳಿಗೆ ಎರಡು ಮುಖ ಗಳಿವೆ– ಮೊದಲನೆಯದಾಗಿ ಆ ಕರ್ಮವು ಜಗತ್ತಿನಲ್ಲಿ ಒಂದು ಘಟನೆಗೆ ಜನ್ಮ ಕೊಡುತ್ತದೆ ಎಂಬುದು. ಎರಡನೆಯದಾಗಿ ಆ ಕರ್ಮವು ಸರಿಯೋ ತಪ್ಪೋ, ಅದರ ಉದ್ದೇಶ ಒಳ್ಳೆಯದೋ ಕೆಟ್ಟದೋ ಮತ್ತು ಆ ಕರ್ಮವನ್ನು ಮಾಡಬೇಕಿತ್ತೋ ಅಥವಾ ಮಾಡಬಾರದಿತ್ತೋ ಎಂಬುದು. ಕರ್ಮದ ಮೊದಲನೆಯ ಮುಖದ ಬಗ್ಗೆ ಹೇಳುವುದಾದರೆ, ಅದರ ಸಂಪೂರ್ಣ ಪರಿ ಣಾಮವು ಈ ಲೋಕದಲ್ಲೇ ವ್ಯಕ್ತವಾಗಬಹುದು. ಅದರ ಎರಡನೆಯ ಮುಖದ ಪರಿಣಾಮವು ಈ ಲೋಕದಲ್ಲಿ ವ್ಯಕ್ತವಾಗುವುದಿಲ್ಲ, ವ್ಯಕ್ತವಾದರೂ ಬಹಳ ಕನಿಷ್ಠ ಪ್ರಮಾಣದಲ್ಲಿ ಮಾತ್ರ.

ನಿಮಗೆ ಒಬ್ಬ ವ್ಯಕ್ತಿ ಕಲ್ಲೆಸೆದಾಗ, ಅವನ ಆ ಕ್ರಿಯೆಯ ಒಂದು ಪರಿ ಣಾಮವು ತಕ್ಷಣವೇ ವ್ಯಕ್ತವಾಗುತ್ತದೆ. ಅಂದರೆ ಅದರ ಪರಿಣಾಮವಾಗಿ ನೀವು ಗಾಯಗೊಳ್ಳುತ್ತೀರಿ. ಆದರೆ ಈ ಮೂಲಕ ಅವನು ತನ್ನ ಸಾಮರ್ಥ್ಯ ವನ್ನು ದುರುಪಯೋಗಿಸಿದ್ದಾನೆ. ಈ ದುರುಪಯೋಗದ ಶಿಕ್ಷೆ ಅವನಿಗೆ ಇಲ್ಲೇ ಸಿಗಬೇಕೆಂದೇನೂ ಇಲ್ಲ. ಆತನು ನಿಮ್ಮನ್ನು ಗಾಯಗೊಳಿಸಲು ಉದ್ದೇಶಿಸಿದ್ದ; ನೀವು ಗಾಯಗೊಂಡಿರಿ, ಅವನ ಉದ್ದೇಶ ಈಡೇರಿತು. ಆದರೆ ಅದರ ಜೊತೆಗೇ ಅವನು ಒಂದು ತಪ್ಪು ಕೆಲಸವನ್ನು ಮಾಡಲು ಉದ್ದೇಶಿಸಿದ್ದ, ಆ ಉದ್ದೇಶವೂ ಈಡೇರಿತು. ಆದರೆ ಆ ಕ್ರಿಯೆಯ ಪರಿಣಾಮ ನಮ್ಮ ಮುಂದೆ ಬಂದಿಲ್ಲ. ಅಂದರೆ ಮೊದಲನೆಯ ಘಟನಾತ್ಮಕ ಪರಿಣಾಮ ವ್ಯಕ್ತ ವಾಗಿದೆ. ಆದರೆ ಅದರ ಎರಡನೆಯ ಪರಿಣಾಮ ವ್ಯಕ್ತವಾಗಿಲ್ಲ.

ಆ ಎರಡನೆಯ ಪರಿಣಾಮವು ಪೂರ್ಣ ರೂಪದಲ್ಲಿ ವ್ಯಕ್ತವಾಗಲಿರುವ ಸ್ಥಳವೇ ಪರಲೋಕ. ಮನುಷ್ಯನ ಕ್ರಿಯೆಗಳ ಒಂದು ಮುಖವು ಕೆಲವು ಪರಿಣಾಮಗಳನ್ನುಂಟು ಮಾಡುವಂತೆ ಅವುಗಳ ಇನ್ನೊಂದು ಮುಖವೂ

ಕೆಲವಾರು ಪರಿಣಾಮಗಳನ್ನು ಉಂಟು ಮಾಡುತ್ತದೆ. ಇದರಲ್ಲಿರುವ ವ್ಯತ್ಯಾಸ ವೇನೆಂದರೆ, ಮೊದಲನೆಯ ಪರಿಣಾಮವನ್ನು ನಾವು ಈ ಜಗತ್ತಿನಲ್ಲೇ ಕಾಣುತ್ತೇವೆ. ಆದರೆ ಎರಡನೆಯ ಪರಿಣಾಮವನ್ನು ನಮಗೆ ಪೂರ್ಣ ರೂಪ ದಲ್ಲಿ ಕಾಣಲು ಸಾಧ್ಯವಾಗುವುದು ನಮ್ಮ ಮರಣಾನಂತರ ಮಾತ್ರ.

ಈ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯೂ ಇಲ್ಲಿ ತನ್ನ ಕರ್ಮಗಳ ಮೂಲಕ ಯಾವುದಾದರೊಂದು ಫಲಿತಾಂಶವನ್ನು ಸೃಷ್ಟಿಸುತ್ತಲೇ ಇದ್ದಾನೆ. ಅವನು ನಿಷ್ಕ್ರಿಯನಾಗಿರಲಿ ಅಥವಾ ಯಾವುದಾದರೂ ಕ್ರಿಯೆಯಲ್ಲಿ ತಲ್ಲೀನನಾಗಿರಲಿ, ಎಲ್ಲ ಸ್ಥಿತಿಗಳೂ ಅವನ ಪರ ಅಥವಾ ವಿರುದ್ಧವಾದ ಫಲಿತಾಂಶಗಳನ್ನು ಹುಟ್ಟಿಸುತ್ತಲೇ ಇರುತ್ತವೆ. ಅವನ ಗುಣ ಸ್ವಭಾವಗಳು ಜನರಲ್ಲಿ ಅವನ ಬಗ್ಗೆ ಒಂದು ಅಭಿಪ್ರಾಯವನ್ನು ಬೆಳೆಸುತ್ತವೆ. ಅವನು ತನ್ನ ಸಾಮರ್ಥ್ಯಗಳನ್ನು ಯಾವ ರೀತಿ ಬಳಸಿಕೊಳ್ಳುತ್ತಾನೆ ಎಂಬುದನ್ನು ಅವಲಂಬಿಸಿ ಅವನ ಕೆಲಸ ಕಾರ್ಯಗಳು ಸಫಲ ಅಥವಾ ವಿಫಲವಾಗುತ್ತವೆ.

ಒಟ್ಟಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸುತ್ತ, ತನ್ನ ಕರ್ಮಗಳಿಗೆ ಅನುಸಾರವಾದ ಒಂದು ಜಗತ್ತನ್ನು ಸೃಷ್ಟಿಸುತ್ತಲೇ ಇರುತ್ತಾನೆ. ಆದರೆ ಇದು ಇಹಲೋಕದಲ್ಲಿ ಮಾತ್ರ ಉಂಟಾಗುವಂತಹ ಪರಿಣಾಮ. ಅತ್ತ ಮನುಷ್ಯನ ಈ ಕರ್ಮಗಳೇ ಅವು ಸರಿಯೋ ತಪ್ಪೋ ಎಂಬುದನ್ನು ಅವಲಂಬಿಸಿ ಇನ್ನೊಂದು ಬಗೆಯ ಪರಿಣಾಮವನ್ನೂ ಸೃಷ್ಟಿಸುತ್ತಲಿರುತ್ತವೆ. ಅವು ಇನ್ನೊಂದು ಲೋಕದಲ್ಲಿ ಸಂಗ್ರಹವಾಗುತ್ತಿವೆ.

ನಮ್ಮ ಕರ್ಮಗಳ ನೈತಿಕ ಮುಖವೂ ನಿರಂತರವಾಗಿ ತನ್ನ ಪರಿಣಾಮ ಗಳನ್ನು ಸೃಷ್ಟಿಸುತ್ತಲೇ ಇರುತ್ತದೆ. ಧರ್ಮದ ಭಾಷೆಯ ಆ ಪರಿಣಾಮಗಳನ್ನೇ ಸ್ವರ್ಗ ಅಥವಾ ನರಕವೆಂದು ಕರೆಯಲಾಗುತ್ತದೆ. ನಮ್ಮ ಪೈಕಿ ಪ್ರತಿಯೊಬ್ಬನೂ (ತನ್ನ ಕರ್ಮಗಳ ಮೂಲಕ) ತನಗಾಗಿ ಸ್ವರ್ಗವನ್ನೋ ನರಕವನ್ನೋ ನಿರ್ಮಿಸುತ್ತಿದ್ದಾನೆ. ಮನುಷ್ಯನನ್ನು ಪರೀಕ್ಷಾರ್ಥವಾಗಿ ಈ ಲೋಕದಲ್ಲಿ ನೆಲೆಸ ಲಾಗಿರುವುದರಿಂದ, ಸ್ವರ್ಗ–ನರಕಗಳನ್ನು ಅವನ ದೃಷ್ಟಿಯಿಂದ ದೂರವಿಡಲಾಗಿದೆ.

ಪರೀಕ್ಷೆಯ ಅವಧಿ ಮುಗಿದು ಅಂತಿಮ ದಿನವು ಬಂದಾಗ ಪ್ರತಿಯೊಬ್ಬನೂ ತಾನು ತನ್ನ ಕರ್ಮಗಳಿಂದ ನಿರ್ಮಿಸಿದ ಜಗತ್ತನ್ನು ಕಾಣುವನು.

ಇಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತದೆ. ನಮ್ಮ ಕರ್ಮಗಳಿಗೆಲ್ಲ ಒಂದು ನೈತಿಕ ಪರಿಣಾಮ ಇದೆಯೆಂದಾದರೆ ಅದು ನಮಗೆ ಕಾಣಿಸುವುದಿಲ್ಲವೇಕೆ? ಮನೆ ಕಟ್ಟುವುದು ಒಂದು ಕ್ರಿಯೆ. ಈ ಕ್ರಿಯೆಯ ಪರಿಣಾಮ ಸ್ವರೂಪವಾಗಿ ಒಂದು ಮನೆ ನಮಗೆ ಕಾಣಿಸುತ್ತದೆ. ಅದನ್ನು ನಾವು ಕಣ್ಣಾರೆ ನೋಡುತ್ತೇವೆ. ಆದರೆ ಈ ಕ್ರಿಯೆಯ ಇನ್ನೊಂದು ಮುಖ, ಅಂದರೆ ಆ ಮನೆಯನ್ನು ಸಕ್ರಮವಾಗಿ ಕಟ್ಟಲಾಗಿದೆಯೋ ಅಕ್ರಮವಾಗಿ ಕಟ್ಟಲಾಗಿದೆಯೋ ಅಥವಾ ಅದು ಧರ್ಮಬದ್ಧವೋ ಅಲ್ಲವೋ ಎಂಬುದರ ಪರಿಣಾಮ ಎಲ್ಲಿದೆ? ಒಂದು ಕ್ರಿಯೆಗೆ, ಕಣ್ಣಿಂದ ಕಾಣಲಾಗದಂತಹ, ನಾವು ಸ್ಪರ್ಶಿಸಲಾಗದಂತಹ ಪರಿಣಾಮ ಗಳು ಇರುವುದು ಸಾಧ್ಯವೇ?

ಇದರ ಉತ್ತರ ಆ ಕ್ರಿಯೆಯ ಎರಡು ಮುಖಗಳಲ್ಲೂ ಇದೆ. ಯಾವುದೇ ಕ್ರಿಯೆಯ ಬಾಹ್ಯ ಪರಿಣಾಮವನ್ನು ಪ್ರತಿಯೊಬ್ಬರೂ ಮಾತ್ರವಲ್ಲ, ಕ್ಯಾಮರಾದ ನಿರ್ಜೀವ ಕಣ್ಣು ಕೂಡಾ ಸ್ಪಷ್ಟವಾಗಿ ನೋಡಬಹುದು. ಆದರೆ ಯಾವುದೇ ಕ್ರಿಯೆಯ ನೈತಿಕ ಪರಿಣಾಮವನ್ನು ಕೇವಲ ಊಹಿಸಬಹುದೇ ಹೊರತು ಅದನ್ನು ಕಣ್ಣಿನಿಂದ ಕಾಣಲು ಸಾಧ್ಯವಿಲ್ಲ.

ವಸ್ತುತಃ ಈ ವ್ಯತ್ಯಾಸವೇ ನಮ್ಮ ಕ್ರಿಯೆಯ ಎರಡು ಪರಿಣಾಮಗಳು ಯಾವ ರೀತಿಯ ವಿಭಿನ್ನ ಸ್ವರೂಪದ್ದಾಗಿದೆ ಎಂಬುದನ್ನು ವ್ಯಕ್ತಗೊಳಿಸುತ್ತದೆ. ಈ ರೀತಿ ವಿಭಿನ್ನವಾಗಿರುವ ಈ ಎರಡು ಪರಿಣಾಮಗಳ ಪೈಕಿ ಒಂದು ತನ್ನ ಸ್ವರೂಪಕ್ಕೆ ಅನುಗುಣವಾಗಿ ವ್ಯಕ್ತವಾಗುವುದರಿಂದ ನಮಗೆ ಗೋಚರಿಸುತ್ತದೆ. ಇನ್ನೊಂದು ತನ್ನ ಸ್ವರೂಪಕ್ಕೆ ಅನುಗುಣವಾಗಿ ವ್ಯಕ್ತವಾಗದಿರುವುದರಿಂದ ನಮಗೆ ಗೋಚರಿಸುವುದಿಲ್ಲ.

ಇದು ಕೇವಲ ತಾರ್ಕಿಕವಾಗಿ ಸಂಭವನೀಯ ವಿಷಯವಲ್ಲ. ಸೂಕ್ಷ್ಮವಾಗಿ ನಮ್ಮ ಈ ಲೋಕವನ್ನೇ ನಾವು ಅಭ್ಯಸಿಸಿದರೆ, ಇದರೊಳಗೇ ಎರಡೂ

ಬಗೆಯ ಪರಿಣಾಮಗಳಿರುವುದನ್ನು ನಾವು ಪ್ರಾಯೋಗಿಕವಾಗಿ ಕಾಣಬಹುದು. ಇಲ್ಲಿ ಅನೇಕ ಕ್ರಿಯೆಗಳ ಪರಿಣಾಮವು ನಮಗೆ ಮರುಕ್ಷಣವೇ ಗೋಚರಿಸುತ್ತದೆ. ಆದರೆ ಅದೆಷ್ಟೋ ಕ್ರಿಯೆಗಳ ಪರಿಣಾಮ ನಮಗೆ ಗೋಚರಿಸುವುದಿಲ್ಲವಾದರೂ ಆ ಪರಿಣಾಮಗಳ ಅಸ್ತಿತ್ವವನ್ನು ನಾವು ಪ್ರಶ್ನಿಸದೆ ಒಪ್ಪುತ್ತೇವೆ. ನಮ್ಮ ಜಗತ್ತಿನಲ್ಲೇ ಇಂತಹ ಅವ್ಯಕ್ತ ಪರಿಣಾಮಗಳು ಇರಲು ಸಾಧ್ಯವೆಂದಾದರೆ ಇಂತಹದೇ ಅವ್ಯಕ್ತ ಪರಿಣಾಮಗಳು ಬೇರೆ ಕಡೆ ಇರಲು ಖಂಡಿತ ಸಾಧ್ಯವಿದೆ. ಜಗತ್ತಿನ ಸೃಷ್ಟಿಯೇ ಇಂತಹ ಪರಿಣಾಮಗಳು ಇವೆಯೆಂಬುದನ್ನು ಸಾರುತ್ತದೆ.

ಉದಾಹರಣೆಗೆ ಧ್ವನಿಯನ್ನೇ ತೆಗೆದುಕೊಳ್ಳೋಣ, ಧ್ವನಿ ಎಂಬುದು ಕಣ್ಣಿಗೆ ಕಾಣದ ತರಂಗಗಳ ಹೆಸರು. ನಾವು ಮಾತನಾಡಲು ನಾಲಿಗೆಯನ್ನು ಚಲಿಸಿದಾಗ ಅದರಿಂದ ಗಾಳಿಯಲ್ಲಿ ತರಂಗಗಳು ಹುಟ್ಟಿಕೊಳ್ಳುತ್ತವೆ. ಅವುಗಳನ್ನೇ ನಾವು ಧ್ವನಿ ಎಂದು ಕರೆಯುತ್ತೇವೆ. ಧ್ವನಿಯು ಒಂದು ರೀತಿಯಲ್ಲಿ ನಮ್ಮ ನಾಲಿಗೆಯ ಚಲನೆಯಿಂದ ಗಾಳಿಯಲ್ಲಿ ಒತ್ತಲ್ಪಡುವ ಒಂದು ಅವ್ಯಕ್ತ ಅಚ್ಚು. ಒಬ್ಬನು ಮಾತನಾಡಿದಾಗ ಅವನ ಧ್ವನಿಯು ತರಂಗದ ರೂಪದಲ್ಲಿ ಗಾಳಿಯಲ್ಲಿ ಅಚ್ಚೊತ್ತಲ್ಪಡುವುದು ಮಾತ್ರವಲ್ಲ ಅದರಲ್ಲಿ ಶಾಶ್ವತವಾಗಿ ಉಳಿದುಕೊಳ್ಳುತ್ತದೆ. ವಿಜ್ಞಾನಿಗಳ ಪ್ರಕಾರ, ಸಾವಿರಾರು ವರ್ಷಗಳ ಹಿಂದೆ ಜನರು ಆಡಿರಬಹುದಾದ ಮಾತುಗಳು, ಯಾರಾದರೂ ಮಾಡಿದ ಭಾಷಣದ ಧ್ವನಿ, ಎಲ್ಲವೂ ಇವತ್ತು ಕೂಡಾ ತರಂಗಗಳ ರೂಪದಲ್ಲಿ ಗಾಳಿಯಲ್ಲಿ ಸೇರಿಕೊಂಡಿವೆ.

ಇಂದು ಆ ಧ್ವನಿಗಳನ್ನು ಕೇಳಲು ಅಥವಾ ಕಾಣಲು ನಾವು ಸಮರ್ಥರಲ್ಲ. ಅವುಗಳನ್ನು ಸಂಗ್ರಹಿಸಲು ಬೇಕಾದ ಯಂತ್ರಗಳನ್ನು ನಾವು ರಚಿಸಿದರೆ ಮಾತ್ರ ಆ ಧ್ವನಿಗಳನ್ನೆಲ್ಲಾ ಮತ್ತೆ ಕೇಳಲು ನಮಗೆ ಈಗಲೂ ಸಾಧ್ಯವಿದೆ.

ಈ ಉದಾಹರಣೆಯಿಂದ ಪರಲೋಕದ ನಿಗೂಢತೆಯನ್ನು ಅರ್ಥೈಸಲು ಸಾಧ್ಯವಾಗುತ್ತದೆ. ಯಾವ ರೀತಿ ನಮ್ಮ ಸುತ್ತ ವಾಯುವಿನ ಒಂದು ದಟ್ಟ ಪದರವಿದ್ದು, ನಮ್ಮ ಪ್ರತಿಯೊಂದು ಧ್ವನಿಯೂ ಅದರಲ್ಲಿ ದಾಖಲೆಗೊಳ್ಳುತ್ತಿದ್ದರೂ ಆ ಪದರವಾಗಲೀ, ಧ್ವನಿಯು ಅದರಲ್ಲಿ ದಾಖಲಿಸಲ್ಪಡುವುದಾಗಲೀ

ನಮಗೆ ಕಾಣಿಸುವುದಿಲ್ಲವೋ ಹಾಗೇ ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಪರಲೋಕವು ನಮ್ಮ ಇಹಲೋಕ ಜೀವನದ ಸುತ್ತಲೂ ಆವರಿಸಿಕೊಂಡಿದ್ದು, ನಮ್ಮ ನಿರ್ಧಾರ ಆಲೋಚನೆಗಳನ್ನೆಲ್ಲಾ ನಿರಂತರವಾಗಿ ತನ್ನೊಳಗೆ ದಾಖಲಿಸುತ್ತಲೇ ಇದೆ. ಈ ದಾಖಲೆಗಳು ನಮ್ಮ ಮರಣಾನಂತರವಷ್ಟೇ ನಮ್ಮ ಮುಂದೆ ಬರುತ್ತವೆ.

ಒಂದು ಗ್ರಾಮೋಫೋನ್ ಸರಿಯಾಗಿದ್ದು ಅದರಲ್ಲಿ ರೆಕಾರ್ಡ್ ತಿರುಗುತ್ತಿದೆ ಎಂದಾದರೆ ಯಂತ್ರದ ಸೂಜಿಯನ್ನು ಅದರ ಮೇಲೆ ಇಟ್ಟೊಡನೆಯೇ ಆ ಮೌನವಾಗಿದ್ದ ತಟ್ಟೆ ಮಾತನಾಡತೊಡಗುತ್ತದೆ. ಅದು ಸೂಜಿಯನ್ನು ತನ್ನ ಮೇಲೆ ಇಡುವುದನ್ನೇ ಕಾಯುತ್ತಾ ಇತ್ತೋ ಎನ್ನುವಂತೆ ಅದು ತಕ್ಷಣವೇ ಧ್ವನಿಸತೊಡಗುತ್ತದೆ.

ಇದೇ ರೀತಿ ನಮ್ಮ ಎಲ್ಲ ಕರ್ಮಗಳೂ ದಾಖಲಿಸಲ್ಪಡುತ್ತಿವೆ. ಜಗತ್ತಿನ ಸೃಷ್ಟಿಕರ್ತನು ಆಜ್ಞಾಪಿಸಿದ ಕ್ಷಣದಲ್ಲೇ ಈ ದಾಖಲೆಗಳನ್ನೆಲ್ಲಾ ಮನುಷ್ಯನ ಮುಂದಿಡಲಾಗುವುದು. ಅದನ್ನು ಕಂಡು ಮನುಷ್ಯನು ಸ್ಥಂಭೀಭೂತನಾಗಿ, "ಇದೆಂತಹ ಗ್ರಂಥ! ನನ್ನ ಯಾವ ಸಣ್ಣ ದೊಡ್ಡ ಕ್ರಿಯೆಯನ್ನೂ ಇದರಲ್ಲಿ ದಾಖಲಿಸದೆ ಬಿಟ್ಟಿಲ್ಲವಲ್ಲಾ!" (ಪವಿತ್ರ ಕುರ್‌ಆನ್) ಎಂದು ಉದ್ಗರಿಸುವನು.

# ಕೊನೆಯ ಮಾತು

ಮೇಲೆ ಹೇಳಲಾದ ವಿಚಾರಗಳನ್ನೇ ಈಗ ಮತ್ತೊಮ್ಮೆ ಅವಲೋಕಿಸಿ. ನಮ್ಮದು ಒಂದು ನಿರಂತರವಾದ, ಬಹಳ ದೀರ್ಘವಾದ ಜೀವನ. ಮರಣ ಈ ಬದುಕಿನ ಅಂತಿಮ ಮೇರೆಯಲ್ಲ. ಅದು ಜೀವನದ ಇನ್ನೊಂದು ಪರ್ವದ ಆರಂಭ ಬಿಂದು ಮಾತ್ರ. ಮರಣ ನಮ್ಮ ಜೀವನದ ಎರಡು ಹಂತಗಳ ನಡುವಿನ ಒಂದು ಮೈಲಿಗಲ್ಲು.

ಉದಾ: ಒಬ್ಬ ರೈತ ಉಳುತ್ತಾನೆ, ಬಿತ್ತುತ್ತಾನೆ, ಹೊಲವನ್ನು ರಕ್ಷಿಸುತ್ತಾನೆ, ಅದಕ್ಕಾಗಿ ಸಾಕಷ್ಟು ಬಂಡವಾಳ ತೊಡಗಿಸುತ್ತಾನೆ. ಕೊನೆಗೆ ಬೆಳೆ ಸಿದ್ಧವಾಗುತ್ತದೆ. ಆಗ ಅವನು ತನ್ನ ಆ ವರೆಗಿನ ಶ್ರಮದ ಪ್ರತಿಫಲ ಪಡೆಯಲಿಕ್ಕಾಗಿ ಬೆಳೆ ಕೊಯ್ಯುತ್ತಾನೆ. ಇಲ್ಲಿ ಬೆಳೆಯನ್ನು ಕೊಯ್ಯುವ ಕ್ರಿಯೆಯು ಬೆಳೆಯ ಕೊನೆಯ ಹಂತವಲ್ಲ. ಆ ಮೂಲಕ ಅದರ ಒಂದು ಹಂತ ಪೂರ್ಣವಾಗಿ ಇನ್ನೊಂದು ಹಂತ ಆರಂಭವಾಗುತ್ತದೆ ಅಷ್ಟೇ. ಮೊದಲ ಹಂತದಲ್ಲಿ ಬೆಳೆಯನ್ನು ಬಿತ್ತುವ ಮತ್ತು ಸಂರಕ್ಷಿಸುವ ಕ್ರಿಯೆ ನಡೆಯುತ್ತದೆ. ಎರಡನೆಯ ಹಂತದಲ್ಲಿ ಬೆಳೆಯನ್ನು ಕೊಯ್ದು ಬಳಸುವ ಕ್ರಿಯೆ ಇರುತ್ತದೆ. ಕೊಯ್ಯುವುದಕ್ಕಿಂತ ಮುಂಚೆ ವೆಚ್ಚ ಮತ್ತು ಪರಿಶ್ರಮ ಇರುತ್ತದೆ. ಕೊಯ್ದ ನಂತರ ಆ ವೆಚ್ಚ ಮತ್ತು ಪರಿಶ್ರಮದ ಫಲವನ್ನು ಅನುಭವಿಸಲಾಗುತ್ತದೆ.

ಇದೇ ರೀತಿ ನಮ್ಮ ಜೀವನ ಕೂಡಾ. ನಾವು ಈ ಲೋಕದಲ್ಲಿ ಪರಲೋಕದ ಬೆಳೆಯನ್ನು ಬೆಳೆಸುತ್ತಿದ್ದೇವೆ. ನಮ್ಮ ಪೈಕಿ ಪ್ರತಿಯೊಬ್ಬನಿಗೂ

ಪರಲೋಕದಲ್ಲಿ ಒಂದು ಹೊಲವಿದೆ. ಒಂದೋ ಅವನು ಆ ಹೊಲದಲ್ಲಿ ಬೆಳೆ ಬೆಳೆಯುತ್ತಿದ್ದಾನೆ, ಅದಲ್ಲವಾದರೆ ಅದನ್ನು ಹಾಗೆಯೇ ಬಿಟ್ಟು ಬಿಟ್ಟಿದ್ದಾನೆ. ಒಂದೋ ಅವನು ಅಲ್ಲಿ ಬಹಳ ಒಳ್ಳೆಯ ಬೀಜಗಳನ್ನು ಬಿತ್ತುತ್ತಿದ್ದಾನೆ, ಅದಲ್ಲವಾದರೆ ಕೆಟ್ಟ ವಸ್ತುಗಳ ಬೀಜ ಬಿತ್ತುತ್ತಿದ್ದಾನೆ. ಒಂದೋ ಅವನು ಬೀಜ ಬಿತ್ತಿ ಅದನ್ನು ಹಾಗೆಯೇ ಬಿಟ್ಟು ನಿಶ್ಚಿಂತನಾಗಿದ್ದಾನೆ, ಅದಲ್ಲವಾದರೆ ನಿರಂತರ ವಾಗಿ ಅದರ ಮೇಲ್ವಿಚಾರಣೆ ನಡೆಸುತ್ತಾ ಅದನ್ನು ಸಂರಕ್ಷಿಸುತ್ತಿದ್ದಾನೆ. ಒಂದೋ ಅವನು ಮುಳ್ಳು–ಕಂಟಿಗಳ ಬೀಜ ಬಿತ್ತಿದ್ದಾನೆ, ಅದಲ್ಲವಾದರೆ ಫಲ–ಪುಷ್ಪಗಳ ಬೀಜ ಬಿತ್ತಿದ್ದಾನೆ, ಒಂದೋ ಅವನು ತನ್ನೆಲ್ಲಾ ಗಮನ ಮತ್ತು ಸಾಮರ್ಥ್ಯಗಳನ್ನು ಆ ಹೊಲವನ್ನು ಸಂಪನ್ನಗೊಳಿಸುವುದಕ್ಕೇ ಕೇಂದ್ರೀಕರಿಸಿದ್ದಾನೆ, ಅದಲ್ಲವಾದರೆ ಅವನು ಬೇರೆ ಯಾವುದೋ ಕಾರ್ಯಗಳಲ್ಲಿ ಮಗ್ನನಾಗಿ ತನ್ನ ಸಮಯವನ್ನು ಪೋಲು ಮಾಡುತ್ತಿದ್ದಾನೆ.

ನಮ್ಮ ಮರಣದ ವರೆಗಿನ ಅವಧಿಯೇ ಈ ಬೆಳೆಯ ಉತ್ಪಾದನೆಗೆ ನಮ್ಮ ಬಳಿ ಇರುವ ಕಾಲಾವಧಿ. ಮರಣವೆಂಬುದು ಪರಲೋಕದ ಆ ಬೆಳೆ ಯನ್ನು ಕೊಯ್ಯುವ ದಿನ. ಈ ಲೋಕದಲ್ಲಿ ನಾವು ಕಣ್ಣು ಮುಚ್ಚಿದ ಮರು ಕ್ಷಣವೇ ಪರಲೋಕದಲ್ಲಿ ಕಣ್ಣು ತೆರೆಯುತ್ತೇವೆ. ಜೀವನದಾದ್ಯಂತ ನಾವು ಬೆಳೆಸಿದ ಪೈರು ಆ ದಿನ ನಮ್ಮ ಮುಂದಿರುವುದು.

ನೆನಪಿರಲಿ, ಕೊಯ್ಯುವುದಕ್ಕಿಂತ ಮುಂಚೆ ಬಿತ್ತಿದವನು ಮಾತ್ರ, ಆ ಬೆಳೆ ಕೊಯ್ಯುವ ದಿನ ಬೆಳೆ ತೆಗೆಯಬಲ್ಲನು. ಪ್ರತಿಯೊಬ್ಬನೂ ತನ್ನ ಹೊಲ ದಲ್ಲಿ ತಾನು ಏನನ್ನು ಬಿತ್ತಿ ಬೆಳೆಸಿದ್ದನೋ ಅದನ್ನು ಮಾತ್ರ ಕೊಯ್ಯಬಲ್ಲನು. ಹಾಗೆಯೇ ಪ್ರತಿಯೊಬ್ಬನೂ ಮರಣಕ್ಕಿಂತ ಮುಂಚೆ ಈ ಜೀವನದಲ್ಲಿ ಏನನ್ನು ಬೆಳೆಸಿದ್ದನೋ ಅದನ್ನೇ ಕೊಯ್ಯುವನು.

ತಾನು ಬೆಳೆಸಿದ ಬೆಳೆ ಮತ್ತು ತಾನು ಬೆಳೆಸಿದಷ್ಟು ಬೆಳೆ ಮಾತ್ರ ತನ್ನ ಮನೆಗೆ ಬರುತ್ತದೆಂಬುದು ರೈತನಿಗೆ ಸರಿಯಾಗಿ ತಿಳಿದಿರುತ್ತದೆ. ಹಾಗೆಯೇ ಪರಲೋಕದಲ್ಲಿ ಕೂಡಾ ಮನುಷ್ಯನು ಈ ಲೋಕದಲ್ಲಿ ಎಷ್ಟು ಪ್ರಯತ್ನಿಸಿದ್ದನೋ ಅಷ್ಟು ಪ್ರತಿಫಲ ಮಾತ್ರ ಅವನಿಗೆ ಸಿಗುವುದು. ಮಾತ್ರವಲ್ಲ ಅವನು ಯಾವು

ದಕ್ಕಾಗಿ ಪ್ರಯತ್ನಿಸಿದ್ದನೋ ಅದರ ಪ್ರತಿಫಲ ಮಾತ್ರ ಅವನಿಗೆ ಸಿಗುವುದು. ಮರಣ ಎಂಬುದು, ಈ ರೀತಿ ಪ್ರಯತ್ನಿಸಲು ಇರುವ ಅವಧಿಯ ಮುಕ್ತಾಯದ ಘೋಷಣೆ. ಈ ಅವಧಿಯಲ್ಲಿ ನಾವು ಮಾಡಿದ ಪ್ರಯತ್ನಗಳ ಫಲ ಸಿಗುವ ಅಂತಿಮ ಸ್ಥಳವೇ ಪರಲೋಕ.

ಮರಣದ ನಂತರ ಮತ್ತೆ ಪ್ರಯತ್ನ ಮತ್ತು ಪರಿಶ್ರಮದ ಅವಕಾಶ ಯಾರಿಗೂ ಸಿಗದು. ಹಾಗೆಯೇ ಪರಲೋಕದ ಜೀವನ ಎಂದೂ ಕೊನೆಗೊಳ್ಳದು.

ಇದು ಎಷ್ಟೊಂದು ಘೋರ ವಾಸ್ತವ! ಮನುಷ್ಯನು ತನ್ನ ಮರಣಕ್ಕೆ ಮುಂಚೆಯೇ ಈ ವಾಸ್ತವಿಕತೆಯನ್ನು ತಿಳಿದುಕೊಂಡರೆ ಎಷ್ಟು ಚೆನ್ನ! ಏಕೆಂದರೆ ಮರಣದ ನಂತರ ಮೂಡುವ ತಿಳುವಳಿಕೆಯಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ. ಮರಣದ ನಂತರ ಮನುಷ್ಯನು ತನ್ನ ಗತ ಜೀವನದಲ್ಲಿ ತಾನೆಷ್ಟು ದೊಡ್ಡ ತಪ್ಪು ಮತ್ತು ಪರಿಹಾರವಿಲ್ಲದ ತಪ್ಪು ಮಾಡಿದೆನೆಂದು ಪರಿತಪಿಸಬಹುದು ಅಷ್ಟೇ.

ಕಾಲವು ಮನುಷ್ಯನನ್ನು ಬಹಳ ವೇಗವಾಗಿ ಆ ಬೆಳೆ ಕೊಯ್ಯುವ ದಿನದೆಡೆಗೆ ಒಯ್ಯುತ್ತಲೇ ಇದೆ. ಆದರೆ ಮನುಷ್ಯನು ಮಾತ್ರ ತನ್ನ ಆ ಗುರಿಯ ಬಗ್ಗೆ ನಿಶ್ಚಿಂತನಾಗಿದ್ದಾನೆ. ಅವನು ಸಣ್ಣ ಪುಟ್ಟ ಲೌಕಿಕ ಸುಖ-ಲಾಭಗಳ ಬೆನ್ನು ಹತ್ತಿದ್ದಾನೆ. ಅದರಲ್ಲೇ ಮಗ್ನನಾಗಿದ್ದು ತಾನು ಸಕ್ರಿಯನಾಗಿದ್ದೇನೆ ಎಂದು ಭ್ರಮಿಸುತ್ತಿದ್ದಾನೆ. ಆದರೆ ನಿಜವಾಗಿ ಅವನು ತನ್ನ ಅಮೂಲ್ಯ ಸಮಯವನ್ನು ವ್ಯರ್ಥಗೊಳಿಸುತ್ತಿದ್ದಾನೆ.

ಇಂದು ಮನುಷ್ಯನ ಮುಂದೆ ಒಂದು ಸುವರ್ಣ ಅವಕಾಶವಿದೆ. ಅವನು ಅದನ್ನು ಬಳಸಿಕೊಂಡು ತನ್ನ ಭವಿಷ್ಯವನ್ನು ಅತ್ಯಂತ ಉಜ್ವಲಗೊಳಿಸಬಹುದು. ಅವನ ಒಡೆಯನು ಅವನನ್ನು ಅಂತ್ಯವಿಲ್ಲದ ಗೌರವಾದರ ಮತ್ತು ಸುಖವುಳ್ಳ ಸ್ವರ್ಗದೆಡೆಗೆ ಆಹ್ವಾನಿಸುತ್ತಿದ್ದಾನೆ. ಆದರೆ ಅವನು ಇನ್ನೂ ಇಲ್ಲಿಯ ತಾತ್ಕಾಲಿಕ ಸುಖಗಳಲ್ಲೇ ಮೈಮರೆತು ಅದರಲ್ಲಿ ಕರಗಿ ಹೋಗಿದ್ದಾನೆ. ತಾನು ಏನನ್ನೋ ಗಳಿಸುತ್ತಿದ್ದೇನೆ ಎಂದು ಅವನು

ಭ್ರಮಿಸುತ್ತಿದ್ದಾನೆ, ಆದರೆ ಅವನು ಕೇವಲ ಕಳಕೊಳ್ಳುತ್ತಿದ್ದಾನೆ. ಈ ಲೋಕದಲ್ಲೊಂದು ಮನೆಕಟ್ಟಿ ತನ್ನ ಜೀವನವನ್ನು ಕಟ್ಟಿ ಬೆಳೆಸುತ್ತಿದ್ದೇನೆಂದು ಅವನು ಕನವರಿಸುತ್ತಾನೆ, ಆದರೆ ಅವನು ಕಟ್ಟುತ್ತಿರುವುದು ಮರಳಿನ ಗೋಡೆಯನ್ನು ಮಾತ್ರ. ಈ ಮರಳ ಗೋಡೆಗಳ ಉದ್ದೇಶವೇ ಕಟ್ಟಲ್ಪಟ್ಟ ನಂತರ ಬೀಳಬೇಕು ಎಂದಾಗಿರುತ್ತದೆ.

ಮನುಷ್ಯಾ! ನೀನು ನಿನ್ನನ್ನು ಗುರುತಿಸು! ನೀನೇನು ಮಾಡಬೇಕಿತ್ತು? ಏನು ಮಾಡುತ್ತಿರುವೆ?

“ನಾವು ಮಾನವನನ್ನು ಮಣ್ಣಿನ ಸತ್ವದಿಂದ ಸೃಷ್ಟಿಸಿದೆವು. ತರುವಾಯ ಅದನ್ನು ಒಂದು ಸುರಕ್ಷಿತ ಸ್ಥಳದಲ್ಲಿ ತೊಟ್ಟಿಕ್ಕಿದ ಹನಿಯಾಗಿ ಮಾರ್ಪಡಿಸಿದೆವು. ಅನಂತರ ಆ ಹನಿಗೆ ಮಾಂಸಪಿಂಡದ ರೂಪ ಕೊಟ್ಟೆವು. ಬಳಿಕ ಮಾಂಸ ಪಿಂಡವನ್ನು ಮಾಂಸಖಂಡವನ್ನಾಗಿ ಮಾಡಿದೆವು. ಆ ಮೇಲೆ ಮಾಂಸ ಖಂಡವನ್ನು ಎಲುಬುಗಳಾಗಿ ಮಾಡಿದೆವು. ತರುವಾಯ ಎಲುಬುಗಳ ಮೇಲೆ ಮಾಂಸ ತೊಡಿಸಿದೆವು. ಆ ಬಳಿಕ ಅದನ್ನೊಂದು ಬೇರೆಯೇ ಸೃಷ್ಟಿಯನ್ನಾಗಿ ಮಾಡಿ ನಿಲ್ಲಿಸಿದೆವು. ಅಲ್ಲಾಹನು ಮಹಾ ಸಮೃದ್ಧನು, ಸಕಲ ಶಿಲ್ಪಿಗಳಿಗಿಂತ ಶ್ರೇಷ್ಠ ಶಿಲ್ಪಿ. ಅದಾದ ಬಳಿಕ ನಿಮಗೆ ಖಂಡಿತವಾಗಿಯೂ ಸಾಯಲಿಕ್ಕಿದೆ. ಮತ್ತೆ ಪುನರುತ್ಥಾನದ ದಿನ ಖಂಡಿತವಾಗಿಯೂ ನೀವು ಎಬ್ಬಿಸಲ್ಪಡುವಿರಿ.”

(ಪವಿತ್ರ ಕುರ್‌ಆನ್: 23:12–16)